॥ ಹರಿ : ಓಂ ॥

ಶ್ರೀ ವಿಜಯದಾಸರ ಪರಮ ಮುಖ್ಯ ಶಿಷ್ಯರೂ

ಅಪರೋಕ್ಷ ಜ್ಞಾನಿಗಳೂ ದೇವಾಂಶರೂ ಆದ

# ಶ್ರೀ ಗೋಪಾಲ ವಿಟ್ಠಲ

ಶ್ರೀ ಮೋಹನ ವಿಟ್ಠಲ, ಶ್ರೀ ವೇಣುಗೋಪಾಲ ವಿಟ್ಠಲ,

ಶ್ರೀ ಹಯವದನ ವಿಟ್ಠಲರ

ಪ್ರಕಟನೆ  ೩೦

# ಸುಳಾದಿಗಳು [೯೦]


ಪ್ರಕಾಶಕರು— ಶ್ರೀ ವರದೇಂದ್ರ ಸಾಹಿತ್ಯ ಮಂಡಲ ಲಿಂಗಸೂಗೂರ.

ಸಂಚಾಲಕ :— ಹನುಮಂತರಾವ ಗೊರಾಬಾಳ.

ಮೊದಲನೇ ಆವೃತ್ತಿ (೧೦೦೦) ಪ್ರತಿಗಳು.

ಶಾ. ಶಕೆ ೧೮೮೭ ಮಾಘ ವದಿ ೩೦

ಶ್ರೀಗುರು ಪ್ರಾಣೇಶ ವಿಟ್ಠಲರ ಪುಣ್ಯದಿನ.

ಪುಟಗಳು [೩೬೦] ಬೆಲೆ ೩—೮—೦

ಮುದ್ರಕರು— ಪಿ. ಎಸ್. ಹೊಂಬಾಳಿ, ನ್ಯೂ ಗದಗ ಪ್ರಿಂಟರಿ, ಗದಗ.

# ಚಂದಾದಾರರ[illegible] ವಿನಂತಿ

ಈ ಪುಸ್ತಕ ಆಕ್ಟೋಬರ ಕೂ[illegible] ಪ್ರಕಟವಾಗುವದೆಂದು ವಿನಂತಿ ಮಾಡಲಾಗಿತ್ತು. ಅನೇಕ ತೊಂದರೆಗಳು ಬಂದವು ಕಾರಣ ೫ ತಿಂಗಳು ತಡವಾಯಿತು.

೧. ೫೨ ಜನ ಚಂದಾದಾರರಿಂದ ಮತ್ತು ೭ ಜನ ಪೋಷಕರಿಂದ ಹಣ ವಸೂಲಾಗದೆ. ಹಣಕಾಸಿನ ಅಡಚಣೆ.

೨. ನನ್ನ ಮತ್ತು ನನ್ನ ಮನೆಯವರ ದೇಹ ಅನಾರೋಗ್ಯ.

೩. ಶ್ರೀ ಟೀಕಾಕೃತ್ಸ್ವಾದರಥದ ತಯಾರಿ ಕೆಲ್ಸದಲ್ಲಿ ತೊಡಗಿದ್ದು.

೪. ಚಂದಾವಸೂಲಿದೆಸೆಯಿಂದ ತಿರುಗಾಡಿದರೂ ಚಂದಾವಸೂಲಾಗದೆ ೨ ತಿಂಗಳ ಕಾಲ ವ್ಯರ್ಥಕಳೆದದ್ದು.

ಇವೆಲ್ಲ ಅನಿವಾರ್ಯ ಕಾರಣಗಳಿಂದ ಕ್ಷಮಿಸಲು ಪ್ರಾರ್ಥನೆ. ಈ ಮೂವತ್ತನೆ ಪ್ರಕಟನೆಗೆ ಪ್ರಿಂಟಿನ ಚಾರ್ಜು ೯೨೫ ರೂ. ಸುಮಾರು ಪ್ರೂಫ ರೀಡಿಂಗ ಪ್ರವಾಸ ಖರ್ಚು ಟಪಾಲ ವಗೈರೆ ೩೨೫ ಹೀಗೆ ೧೨೫೦ ರೂ ದಲ್ಲಿ ೨೫೦ ರೂ. ಸರಕಾರ ಗ್ರ್ಯಾಂಟ ಮಾತ್ರ ಪ್ರೆಸ್ಸಿಗೆ ಮತ್ತು ಅನಿವಾರ್ಯದಿಂದ ೩೩೦ ರೂ. ಸಾಲ ಮಾಡಿ ಪ್ರೆಸ್ಸು ಇತರ ಖರ್ಚಿನಲ್ಲಿ ವೆಚ್ಚಮಾಡಿದೆ. ಇನ್ನೂ ೪೨೫ ರೂ ಸುಮಾರು ಪ್ರೆಸ್ಸಿಗೆ ೩೩೦ ರೂ ಸಾಲ, ಕೈಗಡ ಒಟ್ಟಿಗೆ ೭೫೫ ರೂ. ಕೊಡುವದಾಗಿದೆ.

ಚಂದಾದಾರರಲ್ಲಿ ೧೦-೧೨ ಸಲ ಪತ್ರದ್ವಾರ ಬಿನ್ನೈಸಲೂ ೨-೩ ಸಲ ಸ್ವಂತ ಹೋಗಿ ವಿನಂತಿ ಮಾಡಿಕೊಂಡರೂ ಚಂದಾಕೊಟ್ಟಿಲ್ಲ. ಪುಸ್ತಕಗಳು ಮಾತ್ರ ಬಹು ಆತುರತೆ ಶ್ರದ್ಧೆಯಿಂದ ತರಿಸಿಕೊಂಡು ಈಪರಿ ಸಂಕಟಕ್ಕೊಳಪಡಿಸಿರುವರು. ಇದರಂತೆ ೭ ಜನ ಪೋಷಕರು ೫೦-೫೦ ರೂ. ಪುಸ್ತಕ ಸಂತೋಷದಿಂದ ತೆಗೆದುಕೊಂಡು ರೂ. ಕೊಡಲು ಮಾತ್ರ ೧॥ ವರ್ಷದಿಂದ ಗೋಳಾಡಿಸಿ ಕೆಲ ಜನರು ನಿಮ್ಮೂರ ಸಹ ಕಟ್ಟಿರುವರು. ದಾಸ ಸೇವೆಯಲ್ಲಿ ಸಹ ಈ ತೊಂದರೆ ಕಾರಣ ತ್ವ.ರಾ. ಬಾಕಿ ಇದ್ದವರು ರೂಪಾಯಿ ಕಳುಹಿಸಬೇಕಾಗಿ ವಿನಂತಿ.

**ಹ. ಗೊ.**

**ಸಂಚಾಲಕ ಮಂಡಲ.**

॥ ಹರಿಃ ಓಂ ॥



॥ ಶ್ರೀ ಗುರು ರಾಜೋ ವಿಜಯತೇ ॥

# ಅರಿಕೆ -

ಆಗತಾದಿ ತ್ರಿಕಾಲಜ್ಞಂ । ಆಗಮಾರ್ಥ ವಿಶಾರದಂ ॥
ತ್ಯಾಗ ಭೋಗ ಸಮಾಯುಕ್ತಂ । ಭಾಗಣ್ಣಾರ್ಯ ಗುರುಂಭಜೆ ॥

ಪುಣ್ಯ ಭೂಮಿಯಾದ ಭಾರತ ವರುಷದಲ್ಲಿ ಅನೇಕ ಪುಣ್ಯತರವಾದ ದೇಶ, ಪುಣ್ಯತರವಾದ ನದಿಗಳು, ಪುಣ್ಯಕರರಾದ ಅನೇಕ ದೇವಾಂಶರ ಅವತಾರವೂ ಆಗಿ ಕಾಲಕಾಲಕ್ಕೆ ಸಜ್ಜನರನ್ನು ಉದ್ಧರಿಸಿದ್ದು ಅನುಭವ ವಾಗಿದೆ. ಅದರಲ್ಲಿ-

ಕೃಷ್ಣಾ, ತುಂಗಾನದಿಗಳ ಮಧ್ಯಪ್ರದೇಶವು ಅತಿಪುಣ್ಯತರವಾದುದರಿಂದಲೇ (ಹೈದರಾಬಾದಸ್ಟೇಟ) ರಾಯಚೂರಜಿಲ್ಲೆಯಲ್ಲಿ ದೇವಾಂಶರಾದ ಶ್ರೀ ವಿಜಯ ದಾಸರು, ಶ್ರೀ ಗೋಪಾಲ ದಾಸರು, ಶ್ರೀ ಮೋಹನ ದಾಸರು, ಶ್ರೀ ಜಗ ನ್ನಾಥ ದಾಸರೂ, ಶ್ರೀ ಪ್ರಾಣೇಶ ದಾಸಾರ್ಯರು ಅವತರಿಸಿ, ಅನೇಕ ಪದ ಸುಳಾದಿಗಳನ್ನು ರಚಿಸಿ, ಮಂದಮತಿಗಳನ್ನುದ್ಧರಿಸಿರುವರು. ಆ ಮಹ ನೀಯರ ಕರುಣೆಯಿಂದಲೇ ಈ ಮಹತ್ಕಾರ್ಯವಾದರೂ, ಅವರು ಅವತರಿ ಸಿದ ಈ ಪುಣ್ಯ ಭೂಮಿಯಲ್ಲಿ ಜರಗುತ್ತಿರುವವದೆಂಬುದೆ ಸಾಕ್ಷಿಯಾಗಿದೆ.

ಶ್ರೀ ವಿಜಯ ದಾಸರ ಸುಳಾದಿ, ಪದಗಳು, ಉಗಾಭೋಗಗಳೆಲ್ಲವೂ ೧ಳ ಪುಸ್ತಕದಲ್ಲಿ ಪ್ರಕಟಿಸಿದ್ದಾಯಿತು. ಮತ್ತು ಇಂದ್ರಾಂಶರಾದ ಶ್ರೀ ಮೊದಲಕಲ್ಲ ಶೇಷದಾಸರು, ಶ್ರೀ ವಿಜಯ ದಾಸರ ಅನುಗ್ರಹದಿಂದ ರಚಿಸಿದ ಕೃತಿಗಳೆಲ್ಲವೂ ಪ್ರಕಟಿಸಿದೆ.

ಶ್ರೀ ವಿಜಯ ದಾಸರ ಸಮಕಾಲೀನರೂ, ಸಾಕ್ಷಾತ್ ಶಿಷ್ಯರೂ, ಅಪರೋಕ್ಷ ಜ್ಞಾನಿಗಳೂ ದೇವಾಂಶರೂ ಆದ ಅನೇಕ ಶಿಷ್ಯರು. ಅದರಲ್ಲಿ

**ಭಕ್ತಿಯಲಿ ಭಾಗಣ್ಣ । ಯುಕ್ತಿಯಲಿ ಮೋಹನ್ನ ।**
**ಶಕ್ತಿಯಲಿ ತಿಮ್ಮಣ್ಣ । ಮುಕ್ತಿಯಲಿ ಆನನ್ನ** (ಆನಂದ)

ಎಂಬ ದಾಸರ ವಚನದಂತೆ ಭಾಗಣ್ಣ ಶ್ರೀಗೋಪಾಲ ದಾಸರು ಶ್ರೀಮೋಹನ ದಾಸರು, ಪಂಗನಾಮದ ತಿಮ್ಮಣ್ಣ ಆದವಾನಿ ದಿವಾನರಾದ ಶ್ರೀ ವೇಣು

ಗೋಪಾಲ ದಾಸರು, ಆನಂದದಾಸರು ಶ್ರೀ ಹಯವದನ ವಿಠಲರು ಶ್ರೀ ವಿಜಯ ದಾಸರ ಅನುಜರೂ ಶಿಷ್ಯರೂ, ಈ ನಾಲ್ಕು ಜನರು ಶ್ರೀ ವಿಜಯ ದಾಸರಿಗೆ ಮುಖ್ಯ ಶಿಷ್ಯರೂ ಅಪರೋಕ್ಷಜ್ಞಾನಿಗಳಿರುವರು ಕಾರಣ ಸದ್ಯ ದೊರೆತ—

| | | |
|---|---|---|
| ಶ್ರೀ ಗೋಪಾಲ ವಿಠಲರವು | ಸುಳಾದಿ | ೭೨ |
| ಶ್ರೀ ಮೋಹನ ವಿಠಲರವು | ,, | ೩ |
| ಶ್ರೀ ವೇಣು ಗೋಪಾಲ ವಿಠಲರವು | ,, | ೧೨ |
| ಶ್ರೀ ಹಯವದನ ವಿಠಲರವು | ,, | ೩ |

ಈ ವರೆಗೆ ದೊರೆತ (೯೦) ಸುಳಾದಿಗಳನ್ನು ಮಾತ್ರ ಇದರಲ್ಲಿ ಸಂಗ್ರಹಿಸಲಾಗಿದೆ. ಇವೆಲ್ಲವೂ ಅಪರೋಕ್ಷ ಜ್ಞಾನಿಗಳಿಂದ ರಚಿತವಾದ ಕಾರಣ ವೇದೋಪನಿಷತ್ ಪುರಾಣಗಳ ಅರ್ಥವೂ ಸ್ಫುಟವಾಗಿ ತೋರುವದಲ್ಲದೆ ಶ್ರೀ ವಿಜಯ ದಾಸರ ಕೆಲ ಪದ ಸುಳಾದಿಗಳಿಗೆ ಟೀಕಾ ರೂಪವಾಗಿ, ಸಜ್ಜನರ ಮನಸ್ಸಿನ ಮೇಲೆ ಒಳ್ಳೇ ಪರಿಣಾಮಕಾರವಾಗಿ ಕಲ್ಲಾದ ಮನವನ್ನು ಕರಗಿಸುತ್ತವೆ. ಇದೇ ಅಪರೋಕ್ಷ ಜ್ಞಾನಿಗಳ ವಚನಗಳಲ್ಲಿರುವ ಮಹಾತ್ಮೆ.

ಶ್ರೀ ಗೋಪಾಲ ವಿಠಲರ ಸುಳಾದಿಗಳಂತು ಬಹ್ವರ್ಥಗರ್ಭಿತ- ಮುಕ್ತಿಯೋಗ್ಯರ ಸಾಧನವಿಷಯ, ಮುಕ್ತಿಯಲ್ಲಿಯೂಸಹ ಶ್ರೀಹರಿಯ ಅಷ್ಟಕೃತ್ವತ್ವ ವಿವರಣೆ, ಭಗವದರ್ಚನೆ ಭಗವದುಪಾಸನೆ, ಭಾವಾಷ್ಟ ಪುಷ್ಪಗಳನ್ನರ್ಪಿಸುವ ಬಗೆ ಬಹು ಉಪನಿಷತ್ ರಹಸ್ಯದಿಂದ ಕೂಡಿವೆ. ಸಾಧನ ಭಾಗವಲ್ಲಿ ಮಡಿ ಮಾಡುವ ಬಗೆ, ವೈರಾಗ್ಯ ಮಾಡುವ ರೀತಿ ಮುಂತಾದವುಗಳು ಬಹಿರಂಗ ವ್ಯಾಪಾರಗಳನ್ನು ಮರೆಸಿ ಭಗವಂತನ ಪಾದಸ್ಮೃತಿ ಕೊಡುವವಾಗಿವೆ. ಮತ್ತು ಅನೇಕ ವಿಧವಾದ ಸ್ತೋತ್ರ ಸುಳಾದಿಗಳು, ಶ್ರೀ ಹರಿ ಸಾಕ್ಷಾತ್ಕಾರ, ಶ್ರೀಹರಿ ಮಾಡಿದ ಲೀಲೆ ತಮ್ಮ ಅನುಭವದಿಂದ ಮೈಮರೆದು ಬಣ್ಣಿಸಿರುವರೆಂಬುದಕ್ಕೆ ಇವರು ದೇವಾಂಶರೆಂದೇ ಶತಸಿದ್ಧ ಮತ್ತು ಪ್ರಮೇಯ ಭಾಗ ಶ್ರೀ ಹರಿಯ ಅಷ್ಟ ಕರ್ತೃತ್ವ, ಶ್ರೀ ಹರಿಯ ಸರ್ವ ಸ್ವಾತಂತ್ರ್ಯ ಜೀವನು ಸರ್ವಥಾ ಕರ್ತನಲ್ಲೆಂಬುದು ಅನೇಕಶ್ರುತ್ಯರ್ಥಗಳಿರುವವಲ್ಲದೆ, ಶ್ರೀ ವ್ಯಾಸ ಪ್ರಣೀತ ಸೂತ್ರಗಳಿಗೆ ಶ್ರೀ ಸರ್ವಜ್ಞರ ಭಾಷ್ಯ, ಶ್ರೀ ಟೀಕಾ ರಾಯರು, ಶ್ರೀ ಮಂತ್ರಾಲಯ ಪ್ರಭುಗಳ ಟೀಕಾ ಟಿಪ್ಪಣಿಗಳ

ಬಹು ಕಠಿಣತರವಾದ ಶಾಸ್ತ್ರವಿಚಾರಾರ್ಥಗಳನ್ನು ಕನ್ನಡದಲ್ಲಿ ವಿಶದೀಕರಿಸಿರುವರು. ಎಷ್ಟೋ ಜನ ಪಂಡಿತರು ಇವರ ಅನುಮಾನ ಯುಕ್ತಿ ಶಾಸ್ತ್ರಾರ್ಥವಿಚಾರ ಬಹು ಸಮಂಜಸವಾದುದೆಂದು ಸರಿಯಾಗಿ ತಿಳಿದುಕೊಂಡು ಆನಂದಬಡುತಲಿರುವರು. ಇನ್ನು ಶ್ರೀಹರಿಯ ಧ್ಯಾನೋಪಾಸನೆ ಕ್ರಮವು ಬಹು ಅಧ್ಯಾತ್ಮವಿಚಾರಗಳೊಂದಿಗೆ ಶಾಸ್ತ್ರ ಮರ್ಯಾದಾ ಮೀರದೇ ಶ್ರೀಹರಿಯೊಲಿದ ತಮ್ಮ ಅನುಭವವನ್ನೇ ತೋರಿಸಿ, ಸಜ್ಜನರಿಗೆ ಸನ್ಮಾರ್ಗತೋರಿದ ಮಹಾತ್ಮರು. ಈಗ ಸದ್ಯ ೭೨ ಸುಳಾದಿ ದೊರೆತಿರುವರು. ಇನ್ನು ಮುಂದೆ ಒಂದೆಡೆ ಕೆಲವು ಶಿಗುವ ಆಶೆ ಇದೆ. ದಾಸರ ಚರಿತ್ರೆ ಪದವನ್ನು ಶ್ರೀದಾಸರ ಋಗರ ಆಜ್ಞೆಯಂತೆ ಕೊಟ್ಟಿದೆ.

ಇದರಂತೆ ಶ್ರೀ ಮೋಹನ ದಾಸರವು ಶ್ರೀ ವೇಣುಗೋಪಾಲ ವಿಠಲರವು ಶ್ರೀ ಹಯವದನ ವಿಠಲರವೂ ಸ್ವಲ್ಪೇ ಸುಳಾದಿಗಳು ಸಿಕ್ಕರೂ ಶ್ರೀಹರಿಯನ್ನೊಲಿಸಿದ ಜ್ಞಾನಿಗಳ ಒಂದೇ ವಾಕ್ಯವು ನಮ್ಮ ಉದ್ಧಾರಕ್ಕೆ ಸಾಕು. ಅನೇಕ ಪ್ರಮೇಯ ಅರ್ಥಗರ್ಭಿತವಾಗಿ ಮನಸ್ಸಿಗೆ ಬಹು ಆನಂದ ಕೊಡುವವಾಗಿವೆ. ಇಂತಹ ಸುಳಾದಿಗಳನ್ನು ಸರ್ವ ಸಜ್ಜನರು ಪಠಿಸಿ ಪಾರಾಯಣ ಮನನಾದಿಗಳನ್ನು ಮಾಡಿ ದಾಸರ ಅನುಗ್ರಹ ಪಡೆದು ಮುಕ್ತಿಯ ಸಾಧನ ನಿರತರಾಗುವರಾದರೆ ಈ ಸೇವೆ ಸಾರ್ಥಕ. ದಾಸವರ್ಯರಂತರ್ಯಾಮಿ ಶ್ರೀಹರಿ ವಾಯುಗಳು ತುಷ್ಟರೆಂದು ಪೂರ್ಣ ನಂಬಿಕೆಯಿದೆ.

ಭಾದ್ರಪದ ಮಾಸದಲ್ಲಿ ಈ ಪುಸ್ತಕದ ಅಚ್ಚಿನ ಕೆಲಸ ಪ್ರಾರಂಭವಾಗಿ ೧೦೪ ಪುಟಗಳು ಮಾತ್ರ ಅಚ್ಚಾದವು. ಏನೇನೋ ಕಾರಣದಿಂದ ಅನೇಕ ವಿಘ್ನಗಳು ಬಂದೊದಗಿ ಕೆಲಸವೇ ನಿಂತಿತು. ಜನೆವರಿ ತಿಂಗಳಿಂದ ಕೆಲಸ ಸಣ್ಣಾಗಿ ಪ್ರಾರಂಭವಾದೀತು. ಆದರೂ ಮತ್ತೆ ಹೆಚ್ಚಿನ ಸಂಕಟಗಳು ಬಂದವು. ದಾಸರ ಆಜ್ಞೆಯಂತೆ ಶ್ರೀ ಗೋಪಾಲ ವಿಟ್ಠಲರ ವಂಶಸ್ಥರಾದ ಶ್ರೀ ವೆಂಕೋಬದಾಸರಲ್ಲಿ ಹೋಗಿ ಅಲ್ಲಿ ಶ್ರೀವಿಜಯ ವಿಟ್ಠಲನ ಅನುಗ್ರಹ ಸಂಪಾದಿಸಿ ಆ ಫಲ ಮಂತ್ರಾಕ್ಷತೆಯ ಮಹತ್ಮೆಯಿಂದ ಈ ಕಾರ್ಯವು ೬ ತಿಂಗಳ ಮೇಲೆ ಇಂದು ಸಫಲವಾದಿತು. ಕಾರಣ ಶ್ರೀ ವೆಂಕೋಬ ದಾಸರೂ ಶ್ರೀ ಸುಬ್ಬಣ ದಾಸರಲ್ಲಿ ಅನೇಕ ವಂದನೆಗಳನ್ನರ್ಪಿಸಿ,

ಚಿರಋಣಿಯಾಗಿದ್ದೇನೆ ಮತ್ತು ಪ್ರೆಸ್ ಕಾಪಿಯನ್ನು ಹಿಂದೆ ಬರೆದುಕೊಟ್ಟ ಹಿರಿಯರಾದ ಪೂಜ್ಯ ಶೇಷಗಿರರಾವ ಬಾಗಲಕೋಟೆ ಮುಕ್ಕಾಂ ಕೆರೂರ ಇವರ ಮಹದುಪಕಾರ. ಮುಂಗಡ ರೊಕ್ಕದ ಆಶಾವನ್ನು ಲೆಕ್ಕಿಸದೆ. ತಮ್ಮ ಅನಾನುಕೂಲತೆಯಲ್ಲಿಯೂ, ಸುಂದರವಾಗಿ ಅಚ್ಚುಕಟ್ಟಾಗಿ ಅಚ್ಚುಮಾಡಿ ಕೊಟ್ಟ ಶ್ರೀ ಪದ್ಮನಾಭಾಚಾರ್ಯ ಹೊಂಬಾಳಿ ನ್ಯೂ ಗದಗ ಪ್ರಿಂಟರಿ ಇವರ ಮಹದುಪಕಾರ ಸ್ಮರಿಸುತ್ತೇನೆ.

## ದಾಸರಲ್ಲಿ ಪ್ರಾರ್ಥನೆ.

ಪ್ರಚಾರ ಪ್ರಕಟನೆ ಕಾರ್ಯಗಳಲ್ಲಿ ಎನ್ನನುಪಯೋಗಿಸಿ ವಿಷಯಾದಿಗಳಿಂದದೂರಮಾಡಿ ಅನೇಕ ಲೌಕಿಕ ಕಾರ್ಯದಿಂದ ದೂರಗೈಸಿ ತಮ್ಮ ಸೇವೆಗೆ ಸೊಂಟಕಟ್ಟಿ ದುಡಿಸಿಕೊಳ್ಳುವವನಿಗೆ ಅನೇಕ ವಿಘ್ನ ತೊಡಕುಗಳ್ಯಾಕೆತಂದು ಕೊಡುವಿರಿ. ಸ್ವಾಮಿ ನಾನಜ್ಞನು ತಿಳಿಯೆ ತಮ್ಮ ಪ್ರೇರಣೆಯಂತೆ ಆಜನ್ಮ ಸೇವೆ ಮಾಡೆಂದು ತಾವು ಆಜ್ಞಾಪಿಸಿದದ್ದು ತಾವೇ ಮರೆತರೆ ಗತಿ ಏನು ? ಅಚ್ಚಿಗಾಗಿ ಕಾಸು ಬೇಕು. ಕಾಸಿಗಾಗಿ ಜನರಲ್ಲಿ ತಿರುಗಿ ತಿರುಗಿ ಬೇಸತ್ತರೂ ಕಾಸು ಕೊಡರು. ಕೆಲರು ಮೋಸವೇ ಮಾಡುವರು. ದಾಸರ ಕಾಲದಲ್ಲಿ ದಾಸರಿಗೆ ಮೋಸ ಮಾಡಿದ ಕೆಲರಿದ್ದ ಮೇಲೆ ಈ ಬಡ ದಾಸ ದಾಸದಾಸನಿಗೆ ಠಕ್ಕಿಸುವದು ವಿಶೇಷವೇನೂ ಅಲ್ಲ. ಇನ್ನು ಮುಂದೆ ಪರರನ್ನು ಬಾಯ್ದೆರಸದೆ ಮುಂದಿನ ಕಾರ್ಯ ಲೇಸಾಗಿ ಸಾಗಿಸಲು ಪ್ರಾರ್ಥಿಸುತ್ತ ದಾಸರನ್ನೇ ಮೊರೆ ಪೊಗುವೆ.

ದಾಸರೇ ಗತಿಯು ನಮಗೆ । ಕಾಸುವೀಸವು
ಬೇಡದಂಥ ಸಿರಿ ಪುರಂದರ । ದಾಸರೆ ಗತಿಯು ನಮಗೆ

ಲಿಂಗಸೂಗೂರ
ಶಕೆ ೧೮೭೭ ಮಾಘ
ವದ್ಯ ೩೦, ೧೨—೩—೫೬

ದಾಸರ ದಾಸ
**ಹನಮಂತರಾವ ಗೊರಾಬಾಳ**
ಸಂಚಾಲಕ ಮಂಡಲ.

# ಶ್ರೀ ಗೋಪಾಲ ವಿಟ್ಠಲರ ಸುಳಾದಿಗಳ

## ಪರಿವಿಡಿ

## ಶ್ರೀ ಮೋಹನ ವಿಠಲರ ಸುಳಾದಿಗಳು

ದೃಷ್ಟಿದೋಷದಿಂದ ಕೆಲ ಸಾಮಾನ್ಯ ತಪ್ಪು ಉಳಿದಿವೆ. ೧ ಗಂಟೆ
ಶ್ರಮಪಟ್ಟು ತಿದ್ದಿ ಓದಲು ವಿನಂತಿ.

# ಶುದ್ಧಿ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೯ | ೧೩ | ಅಷ್ಟಕತೃತ | ಅಷ್ಟಕರ್ತೃತ್ವ |
| ೧೦ | ೬ | ಮಾಂಧ್ಯವಿಲ್ಲಾ | ಮಾಂದ್ಯವಿಲ್ಲ |
| ೨೧ | ೧೬ | ಪುಷ್ಟವೆಂತೆಂದು | ಪುಷ್ಪವೆಂತೆಂದು |
| ೪೧ | ೨೦ | ಅಸ್ಯದೈವರ | ಅನ್ಯದೈವರ |
| ೪೫ | ೧೧ | ಅನುಹುದಯ್ಯಾ | ಅನಹುದಯ್ಯಾ |
| ೪೬ | ೨೨ | ಬನ್ನಬಿಡಿಸಾ | ಬನ್ನಬಡಿಸಾ |
| ೪೯ | ೧೩ | ಭಯಪುಷ್ಟಿಸಿ | ಭಯ ಪುಟ್ಟಿಸಿ |
| ೫೩ | ೬ | ಸಾಹಸವು | ಸಾಹಸ್ರವು |
| ೬೨ | ೧೪ | ಹರಿ | ಹರ |
| ೬೪ | ೨೫ | ಕುತೋತ್ಪನ್ನ | ಕುಲೋತ್ಪನ |
| ೭೧ | ೨೭ | ಭಕುತರಲ್ಲವೆ | ಭಕುತರಲ್ಲೇ |
| ೭೭ | ೧೯ | ಪ್ರಾಕೃತವೆಂಬೆರಿ | ಪ್ರಾಕೃತವೆಂಬಿರಿ |
| ೭೮ | ೨೦ | ಲಯ ನು | ಲಯವನು |
| ೯೪ | ೪ | ಕಾಯಾದಿಗಳು | ಕಾಮಾದಿಗಳು |
| ೯೫ | ೧೬ | ತನ್ನವರಿಯ | ತನ್ನ ಮರಿಯ |
| ೯೭ | ೨೨ | ಕಾಲು | ಶಾಲು |
| ೧೦೪ | ೨೨ | ಕೊಂದೆನಲಲ್ಲ | ಕೊಂದೆನಲಿಲ್ಲ |
| ೧೦೫ | ೧೨ | ಪಾದಡಿಯಲಿ | ಪಾದದಡಿಯಲಿ |
| ೧೦೭ | ೫ | ಭಗರೋಗವ | ಭವರೋಗವ |
| ೧೦೭ | ,, | ಸಕವರ್ಾ | ಸುಕವರ್ಾ |
| ೧೪೧ | ೧೨ | ಕದಿರಾಜ | ಕರಿರಾಜ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೪೪ | ೯ | ವೈರಾಗ್ಗ | ವೈರಾಗ್ಯ |
| ೧೪೫ | ೧೮ | ನಡುವೆ | ನುಡಿವೆ |
| ೧೫೪ | ೧೮ | ವಾಚಾವನ | ವಾಚಾಮನ |
| ೧೭೪ | ೨೪ | ಮೀರದದತೀವೆ | ಮೀರದಲೇವೆ |
| ೧೭೬ | ೧೬ | ಗುಣನಿದಿ | ಗುಣನಿಧಿ |
| ೨೦೫ | ೧೫ | ಫಲರಾದಿತ್ಯ | ಫಲರಾಹಿತ್ಯ |
| ೨೧೩ | ೧೬ | ಭೃತಪಾಲಕನೆ | ಭೃತ್ಯಪಾಲಕನೆ |
| ೨೪೦ | ೧೯ | ಅರಣ್ಯಾವಾಸರಿನ್ನು | ಅರಣ್ಯವಾಸದಿನ್ನು |
| ೩೦೭ | ೨೦ | ಉಡುವದೆಲಿ | ಉಡುವದೆಲ್ಲ |



॥ ಶ್ರೀ ಗುರು ರಾಜೋ ವಿಜಯತೇ ॥

ಶ್ರೀ ಗೋಪಾಲ ವಿಠಲರ ತಮ್ಮಂದಿರೂ, ಶಿಷ್ಯರೂ, ಅಪರೋಕ್ಷ ಜ್ಞಾನಿಗಳೂ ಆದ ರಂಗಪ್ಪ ದಾಸರು ತಂದೆ ಗೋಪಾಲ ವಿಠಲ ವಿರಚಿತ.

# ಶ್ರೀ ಗೋಪಾಲ ವಿಠಲರ ಚರಿತ್ರೆ ಪದ.

ಪದ ರಾಗ ರೂಪಕತಾಳ

ಭಜಿಸಿ ಬದುಕಿರೊ ಅಜನ ಪ್ರಿತ ಶ್ರೀ ವಿಜಯ ವಿಟ್ಠಲ ರಾಯನಾ ।
ಭಜಿನಿ ಮಾಡುವ ವಿಜಯರಾಯರೆ ನಿಜಗುರುಗಳೆಂದಿನಿಪನ ॥ ಪ ॥
ಮೂಲ ಪೇಳುವೆ ವಿಶಾಲ ಮಹಿಮ ಸು । ಶೀಲ ವಿಜಯರಾಯರಾ ॥
ಕಾಲ ಕಾಲಕೆ ಸ್ಮರಿಪ ಶ್ರೀ ಗೋ । ಪಾಲದಾಸ ರಾಯರಾ ॥ ॥ ೧ ॥
ಧದಿ ಪಾಷಾಣ ದಧಿಪ ನೆನಿಸುವ । ಮುದಗಲಾಖ್ಯ ಪುತ್ರನಾ ॥
ಉದರದಲಿ ಉದು ಭವಿಸಿದರು ನಾಲ್ವ । ರದರೊಳಗೆ ಬುಧವರ್ಯನಾ ॥ ೨ ॥
ಪುಟ್ಟಿದಾಗಲೆ ಪಿತ ಮುರಾರಿಯು । ಶಿಷ್ಟ ಶಿಶುವೆಂದೆನುತಲಿ ॥
ಇಟ್ಟ ಈ ವಸುಧಿಯೊಳು ಪೆಸರನು । ಥಿಟ್ಟಭಾಗಣ್ಣನೆನುತಲಿ ॥ ೩ ॥
ಪಂಚ ವತ್ಸರ ಬರಲು ಮನೆಯೊಳು । ಸಂಚಿತ ಸಂಪತ್ತನು ॥
ಪಂಚ ಬಾಣನ ಪಿತನ ಆಜ್ಞದಿ । ಕೊಂಚವಾಗೆ(ವಾಗಲೆಂ)ವೆಂಕಮ್ಮನು ॥ ೪ ॥
ವೆಂಕಟ ರಮಣನ್ನ ಸ್ಮರಿಸುತ । ಮಂಕುಮಗುಗಳ ಸಹಿತದಿ ॥
ಸಂಕಟಾ ಬಡುತಲ್ಲೆ ನಿಂತರಾ । ಸುಂಕ ಪುರದಾ ಸ್ಥಳದಲಿ ॥ ೫ ॥
ಉದರಗೋಸುಗವಾಗಿ ಮತ್ತೆ । ಸದನಗಳು ಬಲು ತಿರುಗುತಾ ॥
ವಿಧಿಲಿಖಿತ ತಪ್ಪದುಯೆನುತ ಕೃಷಿ । ಆದರ ವ್ಯಾಪಾರ ನಡಿಸುತಾ ॥ ೬ ॥
ಏಳು ವರ್ಷವು ಸಾಗಿಸಿ ಶ್ರಮ । ತಾಳದಲೆ ವಟ ವೃಕ್ಷದಾ ।
ಮೂಲದಲಿ ಮಲಗಿರಲು ದೇಹದ । ವ್ಯಾಲೆ ಸರ್ಪನಂದದಿ ॥ ೭ ॥
ಆಡುತಿರಲದು ಕಂಡು ಮಕ್ಕಳು । ಓಡಿ ಪೇಳ್ದರು ಜನನಿಗೆ ॥
ನೋಡ ಬಂದರು ಜನನಿ ಜನರು ಕೊಂ । ಡಾಡಿದರು ಈ ಮಹಿಮಿಗೆ ॥ ೮ ॥
ವೃಕ್ಷವೇರಲು ಸರ್ಪ ಚಿಂತಿಸಿ । ರಕ್ಷಕತ್ವವು ಇವರಿಗೆ ॥
ಲಕ್ಷ್ಮಿ ರಮಣನೆ ರಕ್ಷಿಸುವನೆಂ । ದೀಕ್ಷಿಸೀ ಉತ್ತನೂರಿಗೆ ॥ ೯ ॥
ಬಂದು ದೇವರ ಗುಡಿ ಪ್ರವೇಶಿಸಿ । ನಿಂದು ನಲಿನಲಿದಾಡುತಾ ॥
ಮಂದಿಗಳ ನೋಡಲ್ಕೆ ಮೌನದಿ । ಮಂದಮತಿಯಂತೆ ತೋರುತಾ ॥ ೧೦ ॥

ನಿರುತ ಸೇವೆಯ ಮಾಡೆ ಪುರಜನ । ಹರಿಯ ಮಂದಿರ ದ್ವಾರವ ॥
ಭರದಿ ಬಂಧಿಸಿ ತೆರಳಾಕ್ಷಣ । ಕರವ ಧಾರಿಸಿ(ಜೋಡಿಸಿ) ತುತಿಸುವ ॥ ೧೧ ॥
ವೇಣು ಗಾಯನ ಪ್ರಿಯನು ಎದುರಲಿ । ಕುಣಿವನೂಪುರ ಶಬ್ದವು ॥
ಮುನಿಗಳಲ್ಲಿಹ ಮನುಜರಾಲಿಸೆ । ಮನಕೆ ಕೇವಲ ಮೋದವು ॥ ೧೨ ॥
ಮೌನ ವ್ರತವನು ಮಾಡುತಲಿರೆ ಇದೆ । ಮನುಜನಾ ಮಾತಾಳ್ಪೆನೊ ॥
ಏನಿದಚ್ಚರವೆನುತ ಬಾಧಿಸೆ । ನಾನ ಕ್ಲೇಶವ ಬಟ್ಟನು ॥ ೧೩ ॥
ಶ್ರೈವ ಪಣವನು ಮಾಡಿ ಕೇಳುತ । ಇವರ ಜಯ ಪತ್ರ ಕೇಳಿದಾ ॥
ತವ ಲಿಪಿಸಿ ಕೊಡೆನಲು ಪ್ರಾರ್ಥಿಸೆ । ಕವನ ಪೇಳಲು ತೆರಳಿದಾ ॥ ೧೪ ॥
ಸುತರ ಸ್ವಸ್ಥಿಯ ಗೋಸುಗದಿ ಭೂ । ಪತಿಯ ಸೇವೆಯೊಳಿಟ್ಟಿರೆ ॥
ಚತುರ (ರ) ರಲ್ಲಿ ಚೋಗತ್ವ ಕಲ್ಪಿಸಿ । ಅತಿ ದುರುಳ ಬಾಧಿಸುತಿರೆ ॥ ೧೫ ॥
ಹರಿಯ ಧ್ಯಾನದೊಳಿರಲು ತರುಳರ । ಘೋರ ಬಾಧಿಯ ತಿಳಿದನು ॥
ಭರದಿ ಇಲ್ಲಿಂದ ತುಳಮಹಿಮೆಯ । ತೋರಲವರನು ಬಿಟ್ಟನು ॥ ೧೬ ॥
ಅಂದು ವೇಗದಿ ಮಂದಿರಕೆ ಬಂದು । ನಿಂದು ಮಾತೆಯ ಕರೆಯಲು ॥
ಮಂದ ಹಾಸದಿ ಅನುಜರೀರ್ವರು । ಬಂದ ಸ್ಥಿತಿಯನು ಪೇಳಲು ॥ ೧೭ ॥
ಇತಿತು ಪರಿದ್ವಯ ವತ್ಸರದೊಳು । ಜನನಿ ಘರುಷವ ತ್ರೋರಿದಾ ॥
ವನಜನಾಭನ ಕೃಪೆಯು ಇಂದಿನ । ದಿನ ಪ್ರವೇಶೆಂದು ಪೇಳಿದಾ ॥ ೧೮ ॥
ಹರಿಯ ಕರುಣವು ಉಣಲಿ ಇಲ್ಲವು । ನಿರುತ ಭಿಕ್ಷವ ಬೇಡಲು ॥
ಎರಡು ವತ್ಸರ ಮೌನ ಪ್ರೋಹಿಸಿ । ಸರಸ ವಚನಗಳಾಡಲು ॥ ೧೯ ॥
ಇಂದಿರೇಶನ ಕರುಣದಿಂದಲಿ । ಬಂದ ಸಾಮಗ್ರಿ ನೋಡುತಾ ॥
ಒಂದು ನಾಳಿಗೆ ಬೇಡ ವೆನ್ನಲು [ವೆನೆ]। ಸುಂದರಾಂಗಿಯು ಲೋಭದಿ ॥ ೨೦ ॥
ಗಡಿಗಿ ಏಳನು ತುಂಬಿ ಭೂಮಿಯೊ। ಳಡಗಿಸೆರಡನೆ ದಿನದಲಿ [ಮಧ್ಯಾಹ್ನದಿ] ॥
ನೋಡಿ ಕ್ರಿಮಿರಾಶಿಯನು ಇವರ । ಬೇಡಿಕೊಂಡಳು ಕರುಣದಿ ॥ ೨೧ ॥
ಮಂದಹಾಸದಿ ಮೂರು ಮ್ಯಾಲಕೆ । ತಂದು ವಿಪ್ರರಿಗುಣಿಸಿದ ॥
ಅಂದವಾದೀ [ಛಂದದಿಂದಲಿ] ನಾಲ್ಕುಘಟಗಳು। ಮುಂದಕಿರಲೆಂದು ಪೇಳಿದಾ
ಧಾನು ಉದಯುದಲೆದ್ದು ಶ್ರೀಹರಿ। ಧ್ಯಾನದಲ್ಲಿರೆ ಜನರಿಗೆ [ಬಂದವರಿಗೆ] ॥
ಶ್ರೀನಿವಾಸನ ಕೃಪೆಯ ಪೇಳಿದ । ನಾನಾಬಗೆ ಕೇಳ್ವವಂಗೆ ॥ ೨೨ ॥
ಈ ಮಹತ್ಮರರಕೂಡ ವಿಪ್ರನು । ಪ್ರೇಮಗವಚನಳಾಡುತಾ ॥

ಯಾಮರಾತ್ರಿಯುಗಮಿಸಿ ಪೋಗಲು। ತಾಮನದಿ ಚಿಂತೆಯಮಾಡುತಾ॥೨೪॥
ಮರಳಿ ಸಂಧ್ಯಾವಂದನೆಯ ಮಾಡಿ । ಕರದಿಂದರ್ಘ್ಯವ ಕೊಡುತಿರೆ ॥
ತರುಣಿಯನು ಅಸ್ತಾದ್ರಿಯಲಿ ಕಂಡು ಪರಮ ಹರುಷವ ಬಡುತಿರೆ ॥ ೨೫ ॥
ಪರಿ ಪರಿ ಚರ್ಯ ಕಂಡು ರಾಜನು । ದರ್ಶನಾದೀತೆಂದನು ॥
ಹರಿಯ ಸನ್ನಿಧಿ ಕ್ಲಪ್ತ ದ್ರವ್ಯವು । ಕರಿಯ ಕುದುರಿಯ ಕೊಡುವನು ॥ ೨೬ ॥
ಈಪರಿಂದಲಿ ಪೇಳಿ ಹವಿ [ಲಿ]ಕನ । ಭೂಪತಾಕಂಡಾಕ್ಷಣ ॥
ಈ ಪೃಥ್ವಿಪಪ ನಿನಗೆ ತಪ್ಪದೆಂದು । ತಾ ಪೇಳಿದನು ಸುಲಕ್ಷಣ ॥ ೨೭ ॥
ಧಾತ್ರಿಯೊಳು ಯಾದವಗಿರಿಯ ಸ । ತ್ಪಾತ್ರ ತಿಮ್ಮಣ್ಣನೆಂಬನಾ ॥
ತೀರ್ಥಯಾತ್ರೆಯ ನೆವನದಿಂದಾ । ಕ್ಷೇತ್ರದಲಿ ವಾಸಮಾಡ್ದನಾ ॥ ೨೮ ॥
ದೇಶ ದೇಶದ ಜನರುಗಳು ಬಂದು । ವಾಸವಾಗಿ ಇಪ್ಪರೊ ॥
ಶ್ರೀಶನಾಜ್ಞದಿ ಅವರವರ ಮನೋಭಿ । ಲಾಷೆ ಪೂರೈಸುತಿಪ್ಪರೊ ॥ ೨೯ ॥
ವೆಂಕಟ ಕೃಷ್ಣೆಂದು ಪದಗಳಿ । ಗಂಕಿತವು ನೀಡುತಲಿರೆ ॥
ಪೆಂಕಟೇಶನ ದಾಸವರ್ಯರು । ನೋಂಕಿ ವಿಜಯದಿಂಬರುತಿರೆ ॥ ೩೦ ॥
ದಾಸವರ್ಯರು ಕಂಡು ಇವರಿಗುಪ । ದೇಶವನು ಕೊಡಲಾಕ್ಷಣಾ ॥
ಏಸುಜನ್ಮದ ಸುಕೃತವೆನುತಲಿ । ಲೇಸು ಲೇಸೆಂದು ಮೊರದನಾ ॥ ೩೧ ॥
ಉಡುಪಿ ಕೃಷ್ಣನ ದರುಶನಕೆ ಆಜ್ಞಾ । ಕೊಡಬೇಕೆನುತಲಿ ಕೇಳ್ದನು ॥
ತಡವ್ಯಾಕೆನುತಲಿ ಹರಿಸ್ತುತಿಯ ಮಾಡಿ।ಕೊಡುತ ಪೋಗಿಬಾರೆಂದನು ॥೩೨॥
ಮಂಡಗದ್ದಿಯ ಭೀಮನೆಂಬುವ । ಕಂಡು ಪೂಜಿಸಿ ಕಳುಹಿದಾ ॥
ಗಂಡಿತ್ರಯದಲ್ಲಿ ಸುಲಿ(ಳಿ)ಯೆ ಶಿಗದಿರೆ । ದಂಡನಮಿಸಲುದ್ಧರಿಸಿದ ॥ ೩೩ ॥
ಗೋಪ ಬಾಲಕನಾದ ಕೃಷ್ಣನ । ವ್ಯಾಪಾರಗಳ ಸ್ಮರಿಸಿದಾ ॥
ತಾಪುರಕೆಬರು (ಬಂದೊ)ತೋರ್ವ ಮನುಜಗ।ಪಾರಭಾಗ್ಯವತೋರಿದಾ॥೩೪॥
ಉದರ ಶೂಲಿಯು ಬಾಧಿಸಲು ಶ್ರೀ । ಪದುಮನಾಭನ ಷಡ್ರಸಾ ॥
ಐದು ತಾಸಿಗೆ ಭುಂಜಿಸುದೆನೆ । ಮುದದಿ ನಡೆಸಿದ ಮಾನಿಸಾ ॥ ೩೫ ॥
ವಿಜಯರಾಯರ ಪಾದನಿರುತದಿ । ತ್ಯಜಿಸದಲೆ ಭಜಿಸುವರೊ ॥
ವಿಜಯ ವಿಟ್ಠಲ ಪ್ರತಿಮೆಯನು ಕೊಡೆ । ಭಜಿಸಿ ಪೂಜಿಸಿ ನಲಿವರೊ ॥ ೩೬ ॥
ರಾಜವಳಿಯ ಗ್ರಾಮದಲಿ ಹರಿ । ಪೂಜಿ ಮಾಡುತ ಗಿರಿಯಲಿ ॥
ಮೂಜಗತ್ಪತಿರಥದೊಳಿಹನೆಂದು । ನೈಜದಲಿ ಪೇಳುತ್ತಲಿ ॥ ೩೭ ॥

ಕ್ಷಾಮುಪರಿಹರವಮಾಳ್ಪದೆನುತಲಿ । ಗ್ರಾಮಿಕರು ಕರಮುಗಿಯಲು ॥
ಅಮಹಾಮೂಷಮನುಜನಿಂದಲಿ । ಕ್ಷೇಮವಾಗೆ ಕೊಂಡಾಡಲು ॥ ೩೮ ॥
ಇವರ ಸ್ತುತಿಸಲು ಸೂತಶಾಖದಿ । ಲವಣವಧಿಕಮಾಡಲು ॥
ಲವಣವಾನಿಜನಾರ್ದನಗರ್ಪಿಸಿ । ಸವಿದುಭುಂಜಿಸಿಪೊಗಳಲು ॥ ೩೯ ॥
ವೀರಗರ್ವಿಲಿ ಘೊರೆಯುಗಳು । ಘೋರಿಸಲುತನ್ನನುಜರಾ ॥
ವಾರಿಸೋಟದಿನೋಡಿ ಪ್ರಾರ್ಥಿಸೆ । ಸೇರಿದರು ಸ್ವಪುರವನಾ ॥ ೪೦ ॥
ಪುನಹ ಕೃಷ್ಣನ ದರುಶನಕೆ । ತಮ್ಮನುಜರಿಂದಲಿ ನಡೆದರು ॥
ಜನನ ರಹಿತನು ವನುತೆ ಗರ್ಭದಿ । ಜನಿಸೆ ದೃಶ್ಯನಾದನು ॥ ೪೧ ॥
ಕ್ಷಿತಿಯೊಳಗೆ ತನಗಾದ ಅನುಭವ । ಅತಿಶಯವನು ಪೇಳುತಾ ॥
ರತಿ ಪತಿ ಪಿತರನ್ನು ತನ್ನಯ । ಸುತನತೆರದಲಿ ಸೆಳವುತಾ ॥ ೪೨ ॥
ಕ್ಷಿತಿಯೊಳಗೆ ಶ್ರೀರಂಗರಾಜನ । ಅತಿವಿಭವ ನೋಡುವರೊ ॥
ಕೃತಿ(ಕ್ಷಿತಿ)ಪತಿನಿಂದಾಸ್ತುತಿಯ ಮಾಡು । ತತಿಮುದವ ಬಡುತಿಹರೊ ॥೪೩॥
ಭೂಸುರರು ನದಿಯಲ್ಲಿ ಬರುತಿರೆ । ಲೇಸುಭೋಜನ ಬಯಸಲೂ ॥
ದಾಸವರ್ಯರು ಅವರ ಮನೋಽಭಿ । ಲಾಷೆಯಿಂತಲಿಸಲಿಸಲು ॥ ೪೪ ॥
ವಸುಧಿಪತಿ ಕಂಚೀವರದ ರಾಜನ । ವಸನಕೆ ದೀಪ ಸೋಂಕಲೂ ॥
ಮುಸುಕು ತೊರದು ತುಂಗ ನದಿಯೊಳು । ನಸುನಗುತ ಕರನೊರಸಲು ॥೪೫॥
ಅರೆ ಮಾತುಗಳಾಡುತಲಿ ಹಯ । ವೇರಿ ಬಂದನು ಬಳಿಯಲಿ ॥
ಸೂರಿಜನ ಸಂಪ್ರಿಯನೆಂದು । (ತೋರಿ) ಸಾರಿದನು ಸಜ್ಜನರಲಿ ॥ ೪೬ ॥
ತರುಣಿ ಕ್ಷೀರವು ತಂದು ಕೊಡುತಿರೆ । ಭರದಿ ಮರಳೊಳಗೆರದನು ॥
ಮರಳಿ ಗುಡಿಯೊಳು ಕಂಡು ಬರುತಿರೆ । ಕರುಣ ನಿಧಿಯನು ತೋರ್ವನು ॥೪೭॥
ಕುಂಡಲಾಗಿರಿಯಲ್ಲಿ ವಿಪ್ರನು । ಕಂಡು ವಿಜಯ ರಾಯರಾ ॥
ದಂಡನಮನವ ಮಾಡಿ ಕೇಳ್ದನು । ಪ್ಡಂಡ ಕ್ಷಯರೋಗಕಳಿತ್ವರಾ ॥೪೮॥
ಹರುಷದಿಂದುತ್ತು ನೂರು ಸೇರಲು । ಪರಿಹರಾಗುವದೆಂದನೂ ॥
ಬರಲು ಭಕ್ರಿಯುಪ್ರೊಳಗೆ ನಾಲ್ವ । ತ್ತೊರುಷ ಆಯುವನಿತ್ತನು ॥೪೯॥
ಸುಧಸುಪಾತ್ರದಿ ಪಿಡಿದ ಹರಿಯನು । ಮುದದಿ ಸ್ಮರಿಸುತ ಕೊಟ್ಟನು ॥
ಪದುಮನಾಭನು ಕೋಪದಿಂದಿರೆ । ಶ್ರೀದಬಾರೆಂದು ಕರೆದನು ॥೫೦॥
ಕರವೀರ ಪುರನಿಲಯ ಲಕುಮಿಯ । ಪರನು ಹರುಷದಿ ತುತಿಸಿದಾ ॥

ಶರಣರಿಗೆ ಆಪದವನೊದಗಲು । ಗುರುದಯದಿ ಪರಿಹರಿಸಿದಾ ॥೫೧॥
ಮಂದಹಾಸದಿ ರಾಘವೇಂದ್ರರ । ವೃಂದಾವನಕಭನಮಿಸಿದಾ ॥
ಮುಂದೆ ನಡೆವ ವಿಚಿತ್ರ ಚರ್ಯ । ನಂದವಲಿ ಸಂಸ್ತುತಿಸಿದಾ ॥೫೨॥
ಅನುಜಹರಿಯನು ಕಾಣದಲೆ ತನ । ಮನದಿ ಸ್ಮರಿಸುತ ನಿಲ್ಲಲು ॥
ಕನಕಗಿರೀಶನ ಪ್ರಾರ್ಥಿಸುತ ಶ್ರೀ । ವನಿತೆಯುರಸನತೋರಲು ॥೫೩॥
ತೇರಿನುತ್ಸಹ ನೋಡಿ ಹರುಷದಿ। ಬಾರೊ ಮನ(ಮನೆಗೆ) ಕೆಂದುಸ್ತುತಿಸಿದ ॥
ಪುರಕೆ ಬರುವ ಕಾಲದಲಿ ಹರಿ । ಕರುಣವಿರಲೆಂದು ಪೇಳಿದಾ ॥ ೫೪ ॥
ಪ್ರಾಣಸಖಗಪವೃತ್ತು ಪೊದಗಿರೆ । ವೇಣುಗೋಪಾಲ ಕೃಷ್ಣನಾ ॥
ನಾನಪರಿಯಲಿ ಪ್ರಾರ್ಥಿಸಿನ್ನು । ಹಾನಿ ಹಿಂದಕ್ಕೆ ಮಾಡ್ದನಾ ॥ ೫೫ ॥
ದುರುಳ ಮಾಯ್ಗಳ ಪುರಕೆ ಪೋಗಿ । ಹರಿಯೆ ಪರನೆಂದು ಪೊಗಳುವ ॥
ಭರದಿ ಬಂದವರಿಲ್ಲ ವಾದಿಸೆ । ಹರುಷದಿಂದಲೆ ಜೈಸುವಾ ॥ ೫೬ ॥
ದ್ವಿಜನು ವಿಜಯ ರಾಯನರು ತನ್ನ । ನಿಜ ಸ್ವರೂಪವ ಕೇಳ್ದನು ।
ಸುಜನ ಶಿರೋಮಣಿ ಮುಕ್ತಿಯಲಿ ಕಾಕ। ನಿಜವೆನುತ ಸ್ತುತಿಮಾಡ್ದನು॥೫೭॥
ನುಡಿದ ವಚನವ ಕೇಳಿ ವಿಪ್ರನು । ಮಿಡುಕಿದನು ಬಲು ಮನದಲಿ ॥
ಸಹಗರದಿ ಗುರು ವಿಜಯರಾಯರು । ದೃಢ ಪೇಳಿದ ನಿಜವೆನುತಲಿ ॥ ೫೮ ॥
ಭವ ವಿಮೋಚನ ಮಾಳ್ಪನದಿಯೊಳು । ಅವಗಹನ ಸ್ನಾನ ಮಾಡುತಾ ।
ಪವನ ಪಿತ ಅಹೋಬಲ ನೃಸಿಂಹನ । ಕವನರೂಪದಿ ಸ್ಮರಿಸುತ ॥ ೫೯ ॥
ಹರುಷದಲಿ ಸತ್ಯ ಬೋಧರಾಯರ । ದರುಶನಕೆ ಪೋಗಿ ನಿಲ್ಲಲು ॥
ತ್ವರದಿ ನೂರವರು ಸ್ತುತಿಯ ಮಾಡೆನೆ । ಸರಸದಿಂವಲಿ ಪಾಡಲು ॥ ೬೦ ॥
ಭರದಿ ವೆಂಕಟ ನೃಸಿಂಹಾರ್ಯರು । ಬರಲು ಚರಣಕೆ ನಮಿಸುತಾ ।
ಅರಸಿ ಆಜ್ಞವೆ ಮುಖ್ಯ ನಿಮಗೆಂದು । ಸರಸ ವಚನಗಳಾಡುತಾ ॥ ೬೧ ॥
ಬಂದ ಬಗಿಯನು ತಿಳಿದು ನಿಮಗಿ । ಷ್ಟೊಂದು ಚಿಂತೆಯಾತಕೆ ಎಂದನು ।
ಮುಂದೆ ತರುಳನು ಮಾಳ್ಪ ಚರಿತೆಯ । ಮಂದಹಾಸದಿ ಪೇಳ್ದನು ॥ ೬೨ ॥
ಮಂಗಳಪ್ರದವಾದ ನಿವೃತ್ತಿ । ಸಂಗಮದಿ ಸ್ನಾನವ ಮಾಡಿದ ।
ಗಂಗೆ ಮೊದಲಾದಖಿಳ ನದಿ ಗು । ತ್ತುಂಗ ಸ್ಥಳಯೆಂದು ಪೇಳಿದ ॥ ೬೩ ॥
ಮೋದದಲಿ ತತ್ವಸಾರ ಪದ ಸು । ಳಾದಿಗಳು ಉಗ ಭೋಗವಾ ॥
ಬೋಧಪೂರ್ಣರ ಶಾಸ್ತ್ರಸಮ್ಮತ ವಾದಕವನವ ಪೇಳುವಾ ॥ ೬೪ ॥

ತನಯ ಅನುಜರ ಧನದ ಗೋಸುಗ । ವಿನಯದಿಂದಲಿ ಕಳುಹಿದಾ ||
ಅನುಜನೋರ್ವಗೆ ಮುಂದಿನಾ ಸ್ಥಿತಿ । ಕನಸಿನಿಂದದಿ ಪೇಳಿದಾ || ೧೫ ||
ಸಣ್ಣವರದ ಸಕಾಗಿ ಶ್ರೀ ಹರಿ । ಯನ್ನು ಬಿನ್ನೈಸೀದನೂ ||
ಎನ್ನ ಸ್ವಾಮಿಯು ಮಹಿಮೆ ಧರೆಯೊಳ । ಗಿನ್ನು [ನೂ]ರೊರುಷೆಂದು ಪೇಳ್ದನು || ೧೬ ||
ಹಿಂದೆ ಅನುಭವ ಜನ್ಮ ಚತುರ್ದಶ । ಇಂದು ಈ ಜನುಮೆಂದನು ||
ಮುಂದೆರಡು ಜನ್ಮದ ಸುಚರಿಯಾ । ನಂದದಲಿ ಕೇಳೆಂದನು || ೧೭ ||
ಕ್ಷಿತಿಯೊಳಗೆ ಗುರು ವ್ಯಾಸ ತತ್ವಜ್ಞರ । ಸುತನೆನಿಸಿ ಸಚ್ಛಾಸ್ತ್ರವಾ ||
ಪ್ರತಿದಿನದ ಪ್ರವಚನ ಮಾಡುತ । ಹುತ ಭುಜನ ಮುದಬಡಿಸುವಾ ||೧೮||
ಎನ್ನ ಸ್ಥಾನಕೆ ನೇರುವಿಯೋ ನೀ । ನಿನ್ನ ವಂಶಾ ಎನ್ನದು ||
ನಿನ್ನ ವಂಶದಿ ಘನ್ನನೆನಿಸುವೆ । ಇನ್ನು ಸಂಶಯ ಸಲ್ಲದು || ೧೯ ||
ಅನುಜ ಕೇಳ್ ಪಾಚಕನು ಜಲಧರ । ಗಣಿಕಜ್ಞಾನಿ ಚಿಕಿತ್ಸಕಾ ||
ಮುನಿಯುಪ್ರಮುಖರು ನಿನ್ನ ವಂಶದಿ(ಉದರದಿ) ಜನಿಸಲು ಘನಬಾಲಕಾ ||೨೦||
ಮಾತೃಗರ್ಭದೊಳಿರಲು ಪ್ರಾಣ್ಯಾಯು । ಪಾತ್ರಿಯಲಿ ಜಲಪಾನವಾ ||
ಧಾತ್ರಿಯೊಳು(ದಾಸ್ತ್ರಿಯೊಳು)ಇಚ್ಛಿಸನವಳ । ಪುತ್ರ ಭಾವವನೈದುವಾ ||೨೧||
ಪುಟ್ಟಿದಾದ್ವಾದಶ ವತ್ಸರದೊಳು । ತೃಷ್ಣಮಹದಾರಿದ್ರವಾ ||
ಅಟ್ಟುಳಿಗೆ ಬಾಯ್ ಬಿಡುವ ಜನಕನ । ಕಷ್ಟಪರಿಹರಮಾಡುವಾ || ೨೨ ||
ಊರ್ವಿಯೊಳು ನಾನಿಟ್ಟುನಾಲಕು । ಉರ್ವರಿತ ಭಾಂಡಗಳನು ||
ಗುರ್ವನುಗ್ರಹದಿಂದ ತೆಗೆದು । ಸರ್ವರಿಗೆ ಸುಖಕೊಡುವನು || ೨೩ ||
ಆವನೆ ಧನ್ಯ ( ಘನ್ನ) ನು ಎನ್ನ ಧನತೆಗ । ದವನೆ ವೆಚ್ಚಾಮಾಳ್ಪನು ||
ಆವನೆ ಎನ್ನ ಸ್ಥಿತಿಗಳನೊಯಿದು । ಜೀವನದಿಗರ್ಪಿಸುವನು || ೨೪ ||
ಎಷ್ಟು ಪೇಳಲಿ ಎನ್ನ ವಂಶದಿ । ಪುಟ್ಟಿದವರಿಗೆ ಪೇಳ್ವದು ||
ಧಿಟ್ಟಗುರುಗಳು ಕೊಟ್ಟ ಅಂಕಿತ । ವಿಟ್ಟುಪದಗಳ ಮಾಳ್ಪದು || ೨೫ ||
ಭಕ್ತಿಯಲಿ ಇವಗ್ಯಾರು ಸರಿಯೆಂಬ । ಉಕ್ತಿಗುರುಗಳ ವಾಕ್ಯವು ||
ಮುಕ್ತಿಸುಖ ವಿಚಿತ್ರ ಪೇಳುವೆ ವಿ । ರಕ್ತರಾಯಯುಕ್ತಿದ್ವಾರವು || ೨೬ ||
ಮಂದಮತಿನಾನಿವರ ಗುಣಗಳು । ಒಂದನಾದರು ಅರಿಯೆನು ||
ಇಂದಿರೇಶನು ನುಡಿಸಿದದು ಆ । ನಂದದಲಿ ಸಂಸ್ತುಪೆನು || ೨೭ ||

ಭಾ ಎನಲು ಭಕುತಿಯನು ಪುಟ್ಟಿಸಿ । ಕಾಯಕ್ಲೇಶವಕಳವನೂ ॥
ಗಾ[ಗ]ಎನಲುಃ ಭವದೂರ ಮಾಳ್ಪನು।ಣ್ಣಾ ಎನಲು ಮುಕ್ತಿಕೊಡುವನು॥೭೮॥
ಇವರ ನಾಮ ಓಂಕಾರಪೂರ್ವಕ । ಸ್ತವನ ಮಾಡಲು ಪವನನು ॥
ತ್ರಿವಿಧ ಲಿಂಗವ ವಿರಜೆಯಲಿ ಕಳೆ । ದವರ ಮುಕ್ತರೊಳಿಡುವನು ॥ ೭೯ ॥
ಉದಯಕಾಲದಿ ಪದವ ಪಠಿಸಲು । ಮುದಡಗಾದರು ಜ್ಞಾನವ ॥
ಒದಗುವದು ಸಂದೇಹ ವಿಲ್ಲದು । ಪದುಮನಾಭನ ಕರುಣವಾ ॥ ೮೦ ॥
**ಏಕದಂತನೆ ಅಂಶದಲಿ ಭೂ** । ಲೋಕದಲಿ ಅವತರಿಸಿದಾ ॥
ತಾಕಳೇವರವ ಧರಿಸಿ ಶ್ರೀ । ಕಳತ್ರನ ತುತಿಸಿದಾ ॥ ೮೧ ॥
ಎರಡು ವಿಂಶತಿ ವರುಷಕೆ ಈ । ಪರಿಚರಿಯುವ ಮಾಡಿದಾ ॥
ಪರಮ ಹರುಷದಿ ಶ್ವಾಸ ಬಂಧಿಸಿ । ಕರಣ ಮಾರ್ಗದಿ ತೆರಳಿದಾ
[ ಶಿರವ ಬೇಧಿಸಿ ತೆರಳಿದಾ ] ॥ ೮೨ ॥
ಸೃಷ್ಟಿಯೊಳು ಚಿತ್ರಭಾನು ಪುಷ್ಯ ಕೃ । ಷ್ಣಾಷ್ಟಮಿರವಿವಾರದಿ ॥
ಬಿಟ್ಟು ದೇಹವ ತಂದೆ ಗೋಪಾಲ । ವಿಟ್ಠಲನ ಪದಧ್ಯಾನದಿ ॥ ೮೩ ॥

॥ ಶ್ರೀ ಗುರುಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥



*

ಹರಿಃ ಓಂ

॥ ಶ್ರೀ ಲಕ್ಷ್ಮೀ ನೃಸಿಂಹಾತ್ಮಕ ಶ್ರೀ ಲಕ್ಷ್ಮೀವೆಂಕಟೇಶ ಪ್ರಸನ್ನ ॥

ಶ್ರೀಗುರು ರಾಜೋವಿಜಯತೇ





## ಶ್ರೀ ವಿಜಯದಾಸರ ಸಾಕ್ಷಾತ್ ಶಿಷ್ಯರು ೪ ಜನ-ಅಪರೋಕ್ಷ ಜ್ಞಾನಿಗಳ ಸುಳಾದಿಗಳು

# ೧. ಶ್ರೀಗೋಪಾಲ ವಿಠ್ಠಲರ ಸುಳಾದಿಗಳು



ಗೋಪಾಲ ವಿಠ್ಠಲ

**ಸುಳಾದಿ ೧.**

ಮುಕುತಿ ಯೋಗ್ಯರಾದ ಭಕ್ತರ ಸಾಧನ ವಿವರ

ರಾಗ- ಭೈರವಿ, ತಾಳ- ಧ್ರುವ

ಮುಕುತಿಯು ಬೇಕು ಎಂಬಾಸಕತಿವುಳ್ಳವರೆಲ್ಲ ।
ಯುಕುತಿಯ ಕೇಳಿ ಎನ್ನ ಶಕುತಿದ್ದಷ್ಟು ಪೇಳುವೆ ।
ಸಕಲ ಧರ್ಮವು ನೋಡಾ ಪ್ರಕಟಾಗೆ ಬಂದವೆರಡು ।
ಭಕುತಿ ಜ್ಞಾನವು ಪುಟ್ಟಿ ತಿಳಿಯಬೇಕು ।
ಸುಖತೀರ್ಥರ ಶಾಸ್ತ್ರದ ಉಕುತಿಯ ಅನುಸರಿಸಿ ।
ಕಕುಲಾತಿ ಹರಿಯಲ್ಲಿ ಮುಕುರಿ ಬಿದ್ದಿರಬೇಕು ।

ಲಕುಮಿ ಮೊದಲು ಮಾಡಿ ಪುಷ್ಕರ ಪರಿಯಂತ ।
ಭಕುತರ ತಾರತಮ್ಯ ಯುಕುತಿಯಿಂದ ಅರಿಯಬೇಕು ।
ಭಕುತರೊಳು ತನ್ನಿಂದಧಿಕರನ್ನು ಕಂಡರಲ್ಲಿ ।
ಭಕುತಿಯನಿಟ್ಟು ಅವರ ಕೃಪೆಯ ಪಡಿಯಬೇಕು ।
ಭಕುತರೊಳು ತನ್ನಿಂದ ಸುಖಿಸುತ್ತಲಿರಬೇಕು ಅ ।
ಶಕತರ ಕಂಡರೆ ಭಕುತಿ ಪುಟ್ಟುವಂತೆ ಕರುಣ
ಮಿಗಲಾಗಿ ಮಾಡಬೇಕು ।
ಸಕಲ ಪ್ರಾಣಿಗಳೆಲ್ಲ ಸುಖದಲ್ಲಿರಲಿ ಎಂದು ।
ವಿಕಸಿತವಾಗಿ ಮುಖ ಪ್ರಕಾಶಿಸುತ್ತಿರಬೇಕು ।
ಭಕುತರೊಳಗೆ ಸಮಾನಿಕರಲ್ಲ್ಯಾದರು ತನಗೆ ।
ಸಖತ್ವವಾಗಿ ಸತತ ಸಕಲ ಇಂದ್ರಿಯಗಳೆಲ್ಲ ।
ಪ್ರಕಟಿಸದೆ ಬಂಧಿಸಿ ಬಕನಂತೆ ಭಕುತಿಯುಕ್ಕು ।
ಯುಕುತಿಬಿಟ್ಟು ಮುಕುತಿದಾಯಕ ಚಲ್ವಗೋಪಾಲ ವಿಠಲನ್ನ ।
ನಖಸಿಖ ಪರಿಯಂತ ನಿತ್ಯ ಧ್ಯಾನವ ಮಾಡು ॥೧॥

ಮಟ್ಟತಾಳ

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ।
ನೇಮದಿ ಬಿಡಬೇಕು ನೇಮದಲ್ಲಿಡಬೇಕು ।
ಸ್ವಾಮಿಯ ಬಿಟ್ಟು ಅನ್ಯ ವಿಷಯ ಕೇಳುವಂಥ ।
ಕಾಮವನು ಹಿಡಿದು ಖಂಡ್ರಿಸಲಿಬೇಕು ।
ಸ್ವಾಮಿಯ ದ್ರೋಹಿಗಳ ಕಂಡರವರ ಮೇಲೆ ।
ಕ್ಷೇಮ ಚಿಂತಿಸದಲ್ಲಿ ಕ್ರೋಧ ಮಾಡಲಿಬೇಕು ।
ಸ್ವಾಮಿ ವಿಷಯದಲ್ಲಿ ತತ್ವ ಧರ್ಮದ ಮಾರ್ಗ ।
ನೇಮವು ಬಲ್ಲಾತನಾಗಿದ್ದರು ಸರಿಯೆ ।
ತಾಮಸ ಜೀವನು ಬಂದು ಕೇಳಿದರೆ ।
ಪಾಮರ ಗರುವದಲೊಶ ಮಾಡಲಿಬೇಕು ।
ತಾಮಸ ಜೀವನ್ನ ತಾ ಮತ್ತೆ ಕಂಡರೆ ।
ತಮಸಿಗೆ ಹೋಗುವಂತೆ ಮೋಹ ಪುಟ್ಟಿಸಬೇಕು ।

ಸ್ವಾಮಿಯ ಧ್ಯಾನಾನಂದ ಭರಿತನಾಗಿ ।
ಪಾಮರನೆದುರಿಗೆ ಮುದದಿ ತಿರುಗಬೇಕು ।
ಸ್ವಾಮಿ ಸರ್ವೋತ್ತಮತ್ವ ಬಿಟ್ಟು ಪೇಳುವಂಥ ।
ತಾಮಸನ್ನ ಕಂಡು ಮತ್ಸರಿಸಲಿಬೇಕು ।
ಸ್ವಾಮಿಯ ಸೇವೆಯು ಬೇಕು ಯೆಂಬುವಂಥ ।
ಕಾಮವು ಸರ್ವದ ಕಕುಲಾತಿಯು ಬೇಕು ।
ಸ್ವಾಮಿಯ ದಾಸರ ಕಂಡರಾಯಿತೆ ಇನ್ನು ।
ಪ್ರೇಮದಿಂದಲಿ ಇನ್ನು ಮೋಹ ಮಾಡಲಿಬೇಕು ।
ಸಾಮಜ ವರದ ಶ್ರೀ ಗೋಪಾಲ ವಿಠ್ಠಲನೆ ।
ಕಾಮ ಕ್ರೋಧಂಗಳಿಗೆ ನಿಯಾಮಕನೆನಬೇಕು ॥೨॥

ರೂಪಕ ತಾಳ

ಆಡಲಿ ಬೇಕಿನ್ನು ಸರ್ವ ಮಾತುಗಳು ।
ಆಡಿಸುವ ಬೇರೆ (ಬ್ಯಾರೆ) ಯೆಂದು ತಿಳಿಯಬೇಕು ।
ನೋಡಲಿ ಬೇಕು ಎಲ್ಲ ಜೀವರು ಮಾಡುವ ಕರ್ಮ ।
ಮಾಡಿಸುವ ಬೇರೆ ಯೆಂದು ತಿಳಿಯಲಿ ಬೇಕು ।
ಮಾಡಬೇಕು ಜಡಗಳಿಂದ ಹರಿಯ ಪೂಜೆ ।
ನೋಡಿ ಚಿಂತಿಸಬೇಕು ಅಲ್ಲಿಪ್ಪ ಮೂರ್ತಿಗಳ ।
ಆಡಿಸುವ ಮೂರ್ತಿ ಬೇಡಿಸುವ ಮೂರ್ತಿ ।
ನೋಡಿಸುವ ಮೂರ್ತಿ ಕೂಡಿ ಚಿಂತಿಸಿ ತನ್ನ ।
ಗೂಡಿನಲ್ಲಿ ನಿತ್ಯ ಮಾಡಬೇಕು ಧ್ಯಾನ ।
ರೂಢಿಗೊಡೆಯ ರಂಗ ಗೋಪಾಲ ವಿಠ್ಠಲಂಗೆ ।
ಈಡಿಲ್ಲವೆಂದು ಕೂಗ್ಯಾಡಬೇಕು ನಿತ್ಯ ॥೩॥

ಝಂಪೆತಾಳ

ಆರು ಪರಿಯ ಭೇದ ತಾರತಮ್ಯವಾಗಿ ತಿಳಿದಿರಲಿಬೇಕು ।
ಕಾರಣ ಅಕಾರಣರ ದಾರಿ ವಿಚಾರಿಸುತ್ತ ।
ಇರಲಿಬೇಕು ಸೋಪಾನಗಳನು ನಾರಾಯಣಗೆ ।
ನಾರಾಯಣನ ರಾಣಿಗೆ ಭೇದ ನಾರಾಯಣಗೆ ಜೀವನಕೆ ಭೇದ।

ಆರಾರು ಜೀವರು ತಮ್ಮೊಳು ತಮಗೆ ಭೇದ ।
ನಾರಾಯಣಗೆ ಜಡಕೆ ನಿತ್ಯ ಭೇದ ।
ಕಾರಣವಾಗಿಪ್ಪ ಜೀವ ಜಡಕೆ ಭೇದ ।
ಆರಿಸುವದು ಜಡಜಡಕೆ ಭೇದ ।
ನಾರಿಯರಿಗೆ ಭೇದ ಪುರುಷರಿಗೆ ಭೇದ ।
ನಾರಾಯಣ ಲಕುಮಿ ಇವರೆ ಎಂದು ।
ತಾರತಮ್ಯವು ನಿತ್ಯ ಮೂರೆರಡು ಭೇದ ನಿತ್ಯ ।
ಸಾರು ತಿಪ್ಪವು ಶ್ರುತಿ ಸ್ಮೃತಿ ವಾಕ್ಯವು ।
ಆರು ಮೂರು ಭಕುತಿಯಿಂದ ಶ್ರೀ ಹರಿಯನ್ನು ।
ಆರಾಧಿಸುವಂಥ ಭಕುತರಿಗೆ ।
ತೋರುತಿಪ್ಪ ತನ್ನ ಮೂರ್ತಿಯಿಷ್ಟರೊಳಗೆ ।
ಸೂರಿಯ ನಂದದಿ ಪೊಳೆವುತಲಿ ।
ಕಾರುಣ್ಯಸಾಗರ ಗೋಪಾಲ ವಿಠ್ಠಲ ।
ಈ ರೀತಿ ಅರಿದವಗೆ ಪೊರೆಯದೆ ಬಿಡನು ॥೪॥

ತ್ರಿಪುಟಿ ತಾಳ

ಭಕುತಿಯ ಮಾಡಿರಿ ಸಕಲವೆಲ್ಲವು ಬಿಟ್ಟು ।
ಮುಕುತಿಗೆ ಸೋಪಾನ ಇದೆ ಇದೆ ಎಂದು ।
ಭಕುತರೆಂಬವರಿಗೆ ಲಕುಮಿಪತಿಯೆ ಭಾಗ್ಯ ।
ಲಕುಮಿ ಪತಿಗೆ ಭಕುತರೇವೆ ಭಾಗ್ಯ ।
ಲಕುಮಿಯನು ಬಿಡುವೆ ಭಕುತರ ಬಿಡೆನೆಂದು ।
ಉಕುತಿ ಶ್ರೀಹರಿ ತಾನು ಶಪಥ ಮಾಡಿಹನು ।
ಸಕಲ ಸತಿಸುತರು ಮಿಕಿಲಾದ ದ್ರವ್ಯ ದೇಹ ।
ಸಕಲವೆಲ್ಲವು ನೋಡಾ ಸ್ನೇಹವು ಅಧಿಕವಾಗಿ ।
ಮುಕುರಾತಿ ಹರಿಯಲ್ಲಿ ಕಕುಲಾತಿ ಇರಬೇಕು ।
ಸಕಲ ಗುಣಪೂರ್ಣ ಗೋಪಾಲ ವಿಠ್ಠಲ ।
ಮಕ್ಕಳ ತಾಯಿ ಆಲಿಸಿದಂತಾಲಿಸುವಾ ॥೩॥

ಅಟ್ಟತಾಳ

ನಿನಗೆ ನಿಜವಸ್ತು ನೀನು ಅರಿತು ನೋಡು ।
ನಿನಗೆ ಆವದು ಎಂದು ಖೂನವು ಪಿಡಿಯಿನ್ನು ।
ವನುತೆ ಸುತರು ನಿನ್ನ ಅನುವಿಗೆ ಬಾರರು ।
ತನು ಸಂಬಂಧಿಗರೆಲ್ಲ ತತ್ಕಾಲದವರೆಲ್ಲ ।
ಸೆನಸದಿರಿವರಿಂದ ನಿನಗೆ ಆಗುವ ಸುಖ ।
ಕನಸಿನೊಳಾದರು ಕಾಣದಿರೆಲೊ ನೀನು ।
ನಿನಗೆ ಸುಖ ದುಃಖ ಕ್ಷಣ ಕ್ಷಣಕೆ ಇನ್ನು ।
ಅನುದಿನ ಬಿಡದಲೆ ಉಣಿಸುವ ಬೇರುಂಟು ।
ಘನ ಮಹಿಮ ನಮ್ಮ ಗೋಪಾಲ ವಿಠ್ಠಲನ್ನ ।
ನೆನವಂಗೆ ಈ ಸುಖ ಅನುಭವವಾಗುವದು ||೬||

ಆದಿತಾಳ

ಸುಲಭವಾಹುದು ಅಗಾಧವಾಹುದು ।
ಗೆಲವು ಆಹುದು ತಿಳಿಯಬಾರದು ।
ನಿಲಕ ಆಹುದು ನೆಲಿಯು ದೋರದು ।
ಒಲಿದ ಬಳಿಕ ಚಲಿಸನೆಂದಿಗು ।
ತಲೆಯು ಕೆಳಗೆ ಮಾಡಿ ಹಲುಬಿದರು ।
ಹಲವು ಕಾಲ ನೆಲೆಯು ದೋರನವಗೆ ತನ್ನ ತಳ ।
ತಿಳಿಯದಂಥ ಮನುಜನಿಗೆ ।
ಅಳಿದು ವಿಷಯಂಗಳನು ಎಲ್ಲ ।
ಮಲವು ತೊಳೆದು ತಿಳಿದು ತನ್ನ ।
ತನ್ನ ಕೆಳಗೆ ಬಿದ್ದೆನೆಂದ ಬಳಿಕ ।
ತಿಳಿಯಗೊಟ್ಟು ಪೊರೆವ ನಾಗ ।
ಕಳೆವ ನಾನಾ ದೋಷರಾಶಿ ।
ಗಳನು ಯೆಲ್ಲನೊ ಕತ್ತಲೆಲ್ಲ ।
ಬೆಳಕು ಮಾಡುವನು ತನ್ನ ।
ಎಳಿಯ ಕರುಣ ನೋಟದಿಂದ ।

ಸುಲಭ ಭಕ್ತವತ್ಸಲ ಗೋ ।
ಪಾಲ ವಿಠ್ಠಲರೇಯ ತನ್ನ ।
ತಿಳಿದ ಹಾಗೆಲ್ಲ ನಾವು ।
ತಿಳಿಸಿ ಕೊಡುವ ತನ್ನನೂ ||೭||

ಜತೆ

ನಂಬಿರೊ ನಂಬಿರೊ ಇಂಬು ಬೇಕೆಂಬೊರು ।
ಡಂಭವ ಬಿಟ್ಟು ಗೋಪಾಲ ವಿಠ್ಠಲನ್ನ ||೮||

## ಸುಳಾದಿ ೨.

ದೇಹದಂಡನೆ ವ್ಯರ್ಥ, ದೇಹದಲ್ಲಿಪ್ಪ ಕ್ಷೇತ್ರಜ್ಞನನ್ನ ತಿಳಿ. ಜ್ಞಾನದಿಂದ, ಗುರುಗತನಾದ ಬಿಂಬನ ಉಪಾಸನಾ ಮಾಡು ಅಧ್ಯಾತ್ಮ ಅಧಿಷ್ಠಾನ ವಿವರ

ರಾಗ ಭೈರವಿ ಧ್ರುವತಾಳ

ವೃತ್ತಿಕೆ ದೇಹವಿನ್ನು ವ್ಯರ್ಥ ಯಾತಕೆ ದಣಿಪೆ ।
ಆರ್ತುಕೊ ಇದೆ ವ್ಯಾಳ್ಯ ಗುರ್ತ ಕೊಡದೆ ।
ತೀರ್ಥ ಪಾದನ ಪಾದ ಕೀರ್ತನೆ ಮಾಡು ಮನದಿ ।
ಸ್ಫೂರ್ತಿಯು ಮಾಡುವನು ಸಾರ್ಥಕಾಗಿ ।
ರಾತ್ರಿ ಹಗಲು ನೀ ತ್ರೀಮೂರ್ತಿಯ ಮರಿಯದೆ ।
ಗಾತ್ರ ಉಪಯೋಗದ ಚಿಂತೆ ತೊರೆದು ।
ಅರ್ಥ ನಿನಗೆ ಮುಖ್ಯ ಆರ್ತುಕೊ ಆವದೆಂದು ।
ವಾರ್ತೆಯು ಬಿಡು ಪೊಲಿಸಬೇಡ ಅನ್ಯ ।
ಶ್ರೋತ್ರ ಜಿಹ್ವೆ ನಾಶಿಕ ಮಾತ್ರದಿ ವಿಷಯದಲ್ಲಿ
ಆರ್ತು ಸ್ವಾದಿಸು ಎಲ್ಲ ಶ್ರೀಹರಿಯೆ ಮರತರೆ(ರ್ತ)ಮರಿಯದೆ
ಆರ್ತರೆ ಅರಿದರೆಂಬೊ ಸ್ಫೂರ್ತಿ ಬರುತಿರಲೊ ।
ಆರ್ತನಾಗಿ ಶಾಸ್ತ್ರ ಪ್ರತಿಪಾದ್ಯವೆ ಮೂರುತಿ ತಿಳಿದು ಮನದಿ ।
ಸ್ತೋತ್ರವ ಮಾಡು ನೀ ಸತ್ಪಾತ್ರದಿಂದ ।
ಯಾತ್ರಿಯು ತೀರ್ಥಗಳು ಎಲ್ಲ ಇದರೊಳುಂಟು ।

ಮರ್ತು ಬಿಡಬೇಡವೊ ಶ್ರೀ ಹರಿಯು ।
ಕ್ಷೇತ್ರಜ್ಞ ನಮ್ಮ ಸಿರಿ ಗೋಪಾಲ ವಿಠ್ಠಲ ।
ಮೂರ್ತಿಮಂತ ನಾಗಿಪ್ಪನೊ ಎಲ್ಲ ಸ್ಥಳದಿ ॥೧॥

ಮಟ್ಟತಾಳ

ಧನವು ಧನವು ಎನ್ನ ಧನದೊಳಗಿಪ್ಪನ್ನ ।
ನೆನೆದು ತೆಗೆದುಕೋ ಶೋಧನವು ಮಾಡಿನೋಡಿ ।
ತನುವಿಗೆ ಕೆಲಸ ವೀಡು ತನು ಬಂಧಿಗಳ ನೋಡು ।
ಎಣಿಕೆ ತಟ್ಟು ಭಾಗವನುಮಾಡು ನಾಲ್ಕು ।
ಎಣಿಸುತ ಅಲ್ಲಲ್ಲಿ ಇರು ಎಲ್ಲ ಸ್ಥಳದಿ ।
ಗುಣ ಹರಿಯದೆಂದು ಗುಪ್ತನಾಗಿಯಿನ್ನು ।
ಅಣು ಘನ ಪರಿಪೂರ್ಣ ಗೋಪಾಲ ವಿಠ್ಠಲ ।
ಅನಿಮಿತ್ಯ ಬಂಧೆಂಬೋ (ಬಂಧುಎಂಬೋ) ಗುಣವುಳ್ಳವನಾಗೊ ॥೨॥

ರೂಪಕ ತಾಳ

ಒಂದು ಅರ್ಥವು ನಿನಗೆ ದೊರಕಿದರಾಯಿತೆ ।
ಚಂದಾದಿ ಚಿಂತಿಸು ಅನಂತ ಪರಿಯಲ್ಲಿ ।
ಒಂದು ಭಾಗ ದೇವ ಸಮುದಾಯಕ್ಕೆ ಕೊಡು ।
ಒಂದು ಭಾಗ ಪಿತರುಗಳಿಗೆ ಯಿನ್ನುಮಾಡು ।
ಒಂದು ಭಾಗ ಪರಿವಾರ ಬಂಧುಗಳಿಗೆ ।
ಚಂದಾದಿ ಕೊಟ್ಟು ಆನಂದವವುಣುಕಂಡ್ಯಾ ।
ನಂದ ಗೋಪಿಯು ಕಂದ ಗೋಪಾಲ ವಿಠ್ಠಲನ್ನ ।
ಚಂದಾದಿ ನಿನ್ನಮನ ಮಂದಿರದೊಳು ತಿಳಿ ॥೩॥

ಝಂಪೆ ತಾಳ

ಜ್ಞಾನವೆ ಮುಖ್ಯ ಸಾಧನ ನಿನಗೆ ನೋಡು ।
ಏನು ಧನದಿಂದಾಗೆ ಕರ್ಮ ಅದರೊಳುಗುಂಟು ।
ಪ್ರಾಣ ಹಿಂಸ ರಹಿತ ಕರ್ಮಮಾಡು ನಿತ್ಯ ।
ಶ್ರೀನಿವಾಸ ಅದಕೆ ಮೆಚ್ಚುವನು ।

ಜ್ಞಾನಮಯ ಕಾಯ ಗೋಪಾಲ ವಿಠ್ಠಲರೇಯ ।
ಕಾಣಿಸುವ ನಿನಗೆ ಕರುಣವು ಮಾಡಿನಿರುತಾ ॥೪॥

ತ್ರಿವಿಡಿ ತಾಳ.

ತನುವು ಮಂಟಪ ಮಾಡು ಮನವೇ ಪೀಠವಯಿಡು ।
ನೆನೆದು ಕುಳ್ಳಿಸು ನಿನ್ನವೊಳಗಿದ್ದ ಮೂರ್ತಿಯಾ ।
ಧ್ಯಾನ ಆವಾಹನಾದಿಗಳ ನೆನೆದು ಅಲ್ಲೆಯಿಪ್ಪ ।
ಅಣು ಸುಹಾ ಮೂರ್ತಿಗೆ ಅಭಿಷೇಕವ ಮಾಡಿಸು ।
ಗುಣ ಮೂರರೊಳಗಿದ್ದಾ ಯೆನಿತಾವಾಹಿಸಿ ನೆನೆದು ।
ಜಿನಸು ವಸನಾಭರಣಾ ಧೂಪ ದೀಪವುಮಾಡು ।
ನೆನಸು ಗಂಧ ಪುಷ್ಪವನು ಮಿಕ್ಕಾದದ್ದೆಲ್ಲ ।
ಗುಣ ಮೂರರಿಂದಾಗ ಪದಾರ್ಥಗಳನ್ನೆಲ್ಲ ।
ನಿನಗೆ ಒಂದು ಉದಕ ಮಾತ್ರ ದೊರಕಿದರೆ ।
ಇನಿತುಪರಿಯು ಎಲ್ಲ ಆದರಿಂದ ಚಿಂತಿಸೋ ।
ಧನದ ಪೂಜಿಗೆ ಆತ್ಯಾಯಾಸ ಮಾಡಲಿಬೇಡ ।
ಘನ ದೈವಾ ನಮ್ಮ ಗೋಪಾಲ ವಿಠ್ಠಲರೇಯ ।
ನಿನಗೆಷ್ಟು ಪರಿಯಲ್ಲಿ ಪೊರೆವ ಆವನ ತಿಳಿ ॥೫॥

ಅಟ್ಟತಾಳ

ಒಳಗೆ ಬಂದರೆ ನಿನ್ನ ಪೊಳಗೆ ಇರುತಲಿಪ್ಪೆ (ಪ್ಪ) ।
ಸುಳುವು (ತಿಪ್ಪೆ) ತಿಪ್ಪ ನಿನ್ನ ಸುತ್ತು ಬಿಡದೆ ಇನ್ನು ।
ಹಲವು ಪರಿ ಕರ್ಮ ನಿನಗಾಗಿ ಮಾಡುತ ।
ಚಲುವ ನಿರ್ಲಿಪ್ತನ ತಿಳಿಯದೆ ಕೆಡುವಿಯಾಕೆ ।
ಸುಲಭವಾಗಿ ಕರತಳದೊಳಗಿದ್ದಂಥ ।
ಫಲವ ನೀ ಕಾಣದೆ ಬಲು ದಣಿವದೇನೊ ।
ಗೆಳೆಯನಾಗಿ ಪಾರ್ಥಗೊಲಿದ ನಮ್ಮ ಸ್ವಾಮಿ ।
ಚಲುವ ಗೋಪಾಲ ವಿಠ್ಠಲರೇಯನ ನೀನು ।
ಘಳಿಗೆ ಮರಿಯಬೇಡ ಬಲುಪ್ರಿಯಾ ಬಲುಪ್ರಿಯಾ ॥೬॥

ಆದಿತಾಳ

ಈವಾಗ ಆವಾಗ ಎಂಬೋದು ಬೇಡವೊ ।
ದೇವನ ಸ್ಮರಣೆಯು ಭಾವದೆ ಕಾಲವು ।
ಪಾವನ ಜಲದಲ್ಲಿ ಆವಾಯು ವಿಪ್ರರು ।
ಆವ ಸೂರ್ಯ ಅಧಿಷ್ಠಾನದಲಿದ್ದು ।
ದೇವನ ಸ್ಮರಣೆಯು ಬರುತ ಇರಲಿ ಕಂಡ್ಯಾ ।
ಕಾವನು ಬಿಡದಿನ್ನು ಗೋಪಾಲ ವಿಠ್ಠಲಾ ॥೭॥

ಜತೆ

ಗೃಹಮೇಧಿ ಮಾಡಿ ನಿನ್ನ ಗೃಹದೊಳು ಯಿಪ್ಪಂಥ ।
ಶ್ರೀಹರಿ ಗೋಪಾಲ ವಿಠ್ಠಲನ್ನ ನೆನಿಕಂಡ್ಯಾ ॥೮॥

## ಸುಳಾದಿ ೩

ಪ್ರಮೇಯ ಮುಕ್ತರ ಪ್ರಕರಣ, ಮುಕ್ತಾವಸ್ಥಾ ವಿವರ-ಪೂರ್ವಕ, ಸಂತತ ಮುಕ್ತರು ಹರಿಯಾಧೀನ ಮುಕ್ತಿಯಲ್ಲಿ. ಶ್ರೀಹರಿಯ ಅಸ್ವಕತ್ವೃತ ವರ್ಣನೆ.

ರಾಗ ಭೈರವಿ    ತಾಳ ದಿತ

ಮುಕ್ತರ ಸ್ಥಿತಿಯನು ವರ್ನಿಸಿದೆ ಪೇಳುವದಕ್ಕೆ ।
ಶಕ್ತರಾರಿನ್ನು ಎನ್ನ ಶಕ್ತ್ಯಾನುಸಾರ ಪೇಳ್ವೆ ।
ಉತ್ತಮ ಮಧ್ಯಮ ಅಧಮ ತರತಮ್ಯದಿಂದ ಜೀವ ।
ಮುಕ್ತಿಲಿ ಇಪ್ಪವರು ಬಿಡದೆಂದೆಂದು ।
ಮತ್ತೆ ತ್ರಿಗುಣಾತ್ಮಕ ಲಿಂಗ ರಹಿತರಾಗಿ ।
ಚಿತ್ಸ್ವರೂಪದಿಂದಲೇ ಸಂಚರಿಸುತ್ತ ।
ಮತ್ತೆ ಸಾಕಾರ ಸರ್ವ ಅಂಗಾಭರಣ ಭೂಷಿತ ।
ವಸ್ತ್ರ ಮಾಲಿಕೆ ಗಂಧ ಪರಿಮಳದಿ ।
ಎತ್ತಿ ಪಿಡಿದ ಶಂಖ ಚಕ್ರ ಆಯುಧ ಧರಿಸಿ ।
ನಿತ್ಯ ಆನಂದ ಆನಂದ ಅನುಭೋಗಿಸುತ್ತ ।
ಅತ್ಯಂತಾ ಭೇದ ಎಲ್ಲ ಸ್ವರೂಪ ಭೂತವಿನ್ನು ।
ಎತ್ತಲಾದರ ನಿತ್ಯವೆಂಬುದಿಲ್ಲ ।

ನಿತ್ಯ ಸೇವಿಯುತ್ತ ಮಿಗಿಂದುದುತ್ತಮರಾದವರಿಗೆ।
ಛತ್ರ ಚಾಮರ ನಾನಾ ಮುಂತಾದದು ।
ಭೃತ್ಯ ಕೆಲಸಕಿನ್ನು ಕೈಜೋಡಿಸಿಕೊಂಡು ।
ಜತ್ತಾಗಿ ನಿಂತಿಪ್ಪರು ಕೆಡಕ್ಕಿಲ್ಲದೆ ।
ಚಿತ್ತ ಶುದ್ಧರೆ ಎಲ್ಲ ಚಂಚಲೀರಿಷಗಳಿಲ್ಲ ।
ಮತ್ತೆ ಕವಲ ಬುದ್ಧಿ ಮಾಂಧ್ಯವಿಲ್ಲಾ ।
ಪತ್ನಿವುಳ್ಳವರು ಕೆಲರು ಪತ್ನಿರಹೀತರು ಕೆಲರು ।
ಅತ್ಯಂತ ಸುಖಿಗಳನ್ನ್ಯಪೇಕ್ಷವಿಲ್ಲ ।
ಪತ್ನಿವುಳ್ಳವರು ತಮ್ಮ ಸತಿಯರಿಂದಲಿ ಕ್ರೀಡಿ ।
ನಿತ್ಯ ಮಾಳ್ಪರು ನೀತವಾಗಿ ಇನ್ನು ।
ಪತ್ನಿ ರಹಿತರಾದವರು ಅತ್ಯಂತ ಸ್ವರೂಪ ।
ಚಿತ್ತಿನಿಂದೆವೇ ತಜ್ಜನ್ಯಸುಖ ।
ಮತ್ತೆ ಆಗದು ರೇತೋಸ್ಖಲನೆ ।
ಮುಕ್ತರಿಗೆ ಅಭಿವ್ಯಕ್ತ ತಜ್ಜನ್ಯಾನಂದಾ ।
ಚಿತ್ತಿನೊಳಗೆ ನಿತ್ಯವೊದಗಿಸುವಾನಂದ ಗೋಪಾಲ ವಿಠ್ಠಲ ।
ಉತ್ತಮ ಪುರುಷ ಬಿಂಬನಾಗಿ ಯಿದ್ದು ॥೧॥

ಮಟ್ಟತಾಳ

ಉದರ ಹಸಿವಿಯಿಲ್ಲ ಮೆದುವರು ಫಲಗಳು ।
ಒದಗೊದು ತಜ್ಜನ್ಯ ಆನಂದವು ವಳಗೆ ।
ಮಧು ಫಲಾದಿಗಳು ಮೆದುವ ಮನಸಿಲ್ಲಾ ।
ಮುದದಿ ತಾವಿದ್ದಲ್ಲಿ ಬಂದು ಸೇರುವವು ।
ಉದಕ ಕುಡುವರಿಗೆ ಒಂದೆಂಡೆನಸಲ್ಲಾ ।
ಕ್ಷುಧೆ ಪಿಪಾಸ ನಿದ್ರಿ ದಶ ಇಂದ್ರಿಯಗಳಿಂದ ।
ಒದಗಿ ಬಾಹುವ ಸುಖ ಯೆಲ್ಲ ಆನಂದವು ।
ವಿಧಿಸೆ ಜೀವನಿಗೆ ಸ್ವರೂಪದೊಳಗೆ ।
ಒದಗಿ ಇಪ್ಪುವದೆಲ್ಲ ಎಲ್ಲ ಅಭೇದವಾಗಿ ।
ವಿಧಿಸಿ ಹೀಗೆ ಒಂದೇ ಜೀವಕ್ಕೆ ಎನಸಲ್ಲಾ ।

ವಿಧಿ ಆದಿ ತೃಣ ಅಂತ್ಯ ಎಲ್ಲ ಜೀವನಕೆ ಹೀಗೆ ।
ಮದನ ನಯ್ಯಾ ಚಲುವ ಗೋಪಾಲ ವಿಠ್ಠಲ ।
ಒವಗಿಸುವಾನಂದ ತರತಮ್ಯದಿಂದ ॥೩॥

ರೂಪಕ ತಾಳ

ಚಿತ್ತಿನಿಂದಲಿ ಹೀಗೆ ಭೋಗ ಬಡುವರು ಸತತ ।
ಮತ್ತೆ ಶುದ್ಧ ಸತ್ವದಿಂದ ಕ್ರೀಡೆ ।
ನಿತ್ಯ ತಮ್ಮಿಂದಲಿ ಭಿನ್ನವಾದದರಿಂದ ।
ಅರ್ಥಿ ಬಡುವರು ನಾನಾ ರೂಪವ ತೆಗೆದುಕೊಂಡು ।
ಹಸ್ತಿ ತುರಗ ನಾನಾ ವಸ್ತ್ರವಾಹನಗಳು ।
ಮತ್ತೆ ಆಗುವರು ಮಹಾಮಹಾ ವಿಚಿತ್ರ ।
ವರ್ತಮಾನವು ಕೇಳಿ ಇದರೊಳಗಿನ್ನು ವಿ ।
ಚಿತ್ರ ವಾಗುವದುಂಟು ಜೀವರ ಸ್ಥಿತಿಗಳು ।
ಉತ್ತಮ ಸಾಂಶ ಜೀವರುಯಿಲ್ಲಿ ।
ಮತ್ತೇಕ ಕಾಲದಿ ತಮ್ಮ ಅಂಶಗಳಿಂದ ।
ಸತ್ವ ಪ್ರಕೃತಿಗೊಂಡು ಚಿತ್ತಬಂದಂತೆ ತಾವು ।
ಹತ್ತೆಂಟು ಇಪ್ಪತ್ತು ನೂರಾರು ಸಾಸಿರ ।
ಮತ್ತೆ ನಾನಾ ರೂಪ ಛತ್ರಚಾಮರ ಸರ್ವ ।
ವಸ್ತ್ರಾಭರಣ ಫಲ ಪುಷ್ಪ ಗಂಧ ಮಾಲೆ ।
ಹತ್ತೆಂಟು ಪರಿ ವಾಹನರಾಗಿ ತಮಗಿಂದಲು ।
ಉತ್ತಮರಾದವರ ಹೊತ್ತಾಡುವರು ಕ್ರೀಡಾ ।
ಮತ್ತೆ ಈಪರಿ ಹರಿಯು ಸೇವಿಸಿ ಪುನಹ ।
ಮತ್ತೆ ತಮ್ಮ ಸ್ವರೂಪ ಚಿತ್ತಿನೊಳು ಕೂಡುವರು ।
ಅತ್ಯಾಯಾಸವು ಸಲ್ಲ ಎಲ್ಲ ಸುಲಭವು ನೋಡಿ ।
ಬತ್ತಿ ಗಿಂದಲಿ ಜ್ಯೋತಿ ಬತ್ತಿಗ್ಹಚ್ಚಿದಂತೆ ।
ವ್ಯಕ್ತವೆಲ್ಲವು ಅವರ ಸಾಧನಗಳು ।
ಇತ್ತ ಕೇಳಿನ್ನು ನಿರಂಶ ಜೀವರ ಗತಿಯು ।
ಪ್ರತ್ಯೇಕ ಒಂದೊಂದು ಅಂಶದಿಂದ ।

ಸತ್ವ ಪ್ರಕೃತಿಗೊಂಡು ಒಂದೊಂದೆ ರೂಪದಿ ।
ಮತ್ತೆ ಸೇವಿಸುವರು ಸಿರಿ ಹರಿಯ ।
ಎತ್ತ ನೋಡಿದರು ಬಲು ರೂಪವಾಗುವ ಶಕ್ತಿ ।
ಮತ್ತಿಲ್ಲಾ ನಿರಂಶ ಜೀವರಿಗೆ ।
ಮುಕ್ತರೊಳಗಿರುತಿಪ್ಪ ಗೋಪಾಲ ವಿಠ್ಠಲನ್ನ ।
ಭಕ್ತರಾನಂದ ಬಲ್ಲವರು ಯಾರೊ ॥೩॥

ಝಂಪೆತಾಳ

ಜ್ಞಾನ ಭಕ್ತಿ ವಿರಕ್ತಿ ಮೂರು ಮುಕುತರರಿಗೆ ।
ನ್ಯೂನವಿಲ್ಲವು ನೋಡು ಒಂದು ಕ್ಷಣವಾದರೂ ।
ಜ್ಞಾನಕೆ ಎಲ್ಲವು ಕಾಣಿಸುವದೆ ಫಲವು ।
ಏನು ಬೇಡಿದ್ದು ಒದಗುವದೆ ಭಕ್ತಿಯ ಫಲ ।
ಕಾಣದೆ ಆಧಿಕ್ಯ ಇಚ್ಛೈಸದಿಪ್ಪುವದೆ ।
ತಾನು ವಿರಕ್ತಿ ಎಂಬುದೆ ಇದುವೇ ।
ಆನಂದ ಮಯವೆಲ್ಲ ಆಡುವ ವಚನಗಳು ।
ಯೋನಿ ಎಂಭತ್ತುನಾಲ್ಕು ಲಕ್ಷ ಜೀವರಗಳು ।
ಗೇಣು ಮೊಳವುಯಿಲ್ಲ ಎಲ್ಲ ಅಣುರೂಪವು ।
ತಾನು ಕಿರಿದು ಯೆಂಬ ಕ್ಲೇಶವಿಲ್ಲಾ ।
ನಾನಾ ಜೀವರು ಪರಸ್ಪರ ವಿರೋಧಿಗಳಿಲ್ಲಾ ।
ಆನಿ ಸಿಂಹಗೆ ಅಲ್ಲಿ ವೈರವಿಲ್ಲಾ ।
ಹೇನು ವೃಶ್ಚಿಕಗಳು ಮೇಲೆ ಓಡಾಡಿದರು ।
ಆನಂದ ಮಯವೆಲ್ಲ ಅವುಗಳಿನ್ನು ।
ಕಾಣರೆಂಬದು ಯಿಲ್ಲ ಹರಿಯನ್ನ ಸರ್ವರು ।
ತಾನು ಸಂದಳಿ ಎಂಬ ಚಿಂತೆಯಿಲ್ಲಾ ।
ಕಾಣಿಸುವ ಹರಿ ತಾನು ಅವರ ಯೋಗ್ಯತೆ ।
ಯಾನುಸಾರವಾಗಿ ತೋರುತಲಿಯಿನ್ನು ।
ಧ್ಯಾನವೆಂಬದು ಇಲ್ಲ ತಮ್ಮ ಸ್ವರೂಪದಿ ।
ಧೇನಿಪರು ತಮಗಿಂತ ಉತ್ತಮರ ಅನೇಕವಾಗಿ ।

ಧ್ಯಾನವ ಮಾಳ್ಪವರು ಹರಿಯು ।
ತಾನಃ ದಿನ ದಿನ ನೂತನನಾಗಿ ಇನ್ನು ।
ಆನಂದಮಯ ಮೂರ್ತಿ ಗೋಪಾಲ ವಿಠ್ಠಲನ್ನ ।
ಕಾಣುವರು ಪ್ರತಿಕ್ಷಣದಿ ಕೆಡಕ್ಕಿಲ್ಲದೆ ||೪||

ತ್ರಿವಿಡಿ ತಾಳ

ಸೃಷ್ಟ್ಯಾದಿ ಅಷ್ಟ ಕರ್ತೃತ್ವವು ಜೀವನ ಸ್ವರೂಪಕ್ಕೆ ।
ಘಟ್ಟಿಯಾಗಿಪ್ಪವು ಎಂದೆಂದಿಗು ಬಿಡದೆ ।
ಪುಟ್ಟಿಸಿಕೊಡುವ ಪ್ರತಿಕ್ಷಣಕೆ ಆನಂದ ಹರಿ ।
ಸ್ಪಷ್ಟದಿ ಅಭಿವ್ಯಕ್ತಿ ಸೃಷ್ಟಿ ನೋಡು ।
ಬಿಟ್ಟು ಜೀವ ನಾನೆಂದು ಪೋಗದೆ ಇಪ್ಪವದೆ ।
ಘಟ್ಯಾಗಿ ಇದೆ ಪಾಲಣೆಯೊ ।
ನಷ್ಟ ಮಾಡಿ ಜಗವ ಮುಕ್ತ ಅಮುಕ್ತ ಜೀವ ।
ಪೊಟ್ಟೆಯೊಳಗೆ ಇಪ್ಪವದೆ ಲಯವು ನೋಡು ।
ಅಷ್ಟು ಕಾರ್ಯಕ್ಕೆ ಜೀವವೆ ದುಡಿವದಿನ್ನು ।
ಘಟ್ಟಿಯಾಗಿದೆ ಹರಿ ನೇಮನ ಕಾಣೊ ।
ನಷ್ಟವಾಗದೆ ಜೀವ ನಿಜವಾಗಿ ಇಪ್ಪವದೆ ।
ಘಟ್ಯಾಗಿ ಜ್ಞಾನ ಹರಿ ಕೊಟ್ಟದೆನ್ನಿ ।
ಸ್ಪಷ್ಟಾದಿ ತನಗಿಂದ ಉತ್ತಮರ ಗುಣಗಳು ।
ಘಟ್ಟ್ಯಾಗಿ ತಿಳಿಯದೆ ಅಜ್ಞಾನವೊ ।
ಕಟ್ಟುಮಾಡಿ ಅಧಿಕ ಆನಂದ ಕೊಡದಿಚ್ಛಾ ।
ವರ್ಕ ಮಾಡಿಪ್ಪದೆ ಬಂಧ ಕಾಣೊ ।
ಪುಟ್ಟಲೀ ಸೊ(ಸ)ದೆ ಪುನಃ ಸಂಸಾರ ಬಿಡಿಸಿದೆ ।
ಘಟ್ಟಿಯಾಗಿ ಇದೆ ಮೋಕ್ಷ ಕಾಣೊ ।
ಅಷ್ಟ ಕರ್ತೃತ್ವವು ಸ್ವರೂಪದೊಳಗಾಗಿ ।
ಘಟ್ಟ್ಯಾಗಿ ನಿಂತು ಮಾಡಿಸಲು ।
ಇಷ್ಟರಿಂದ ಜೀವ. ಮುಕ್ತರುಗಳಾನಂದಾ ।
ಸ್ಪಷ್ಟದಿ ಹರಿಯು ಅಭಿವ್ಯಕ್ತಿ ಮಾಳ್ಪಾ ।

ಇಷ್ಟ ಮೂರುತಿ ರಂಗ ಗೋಪಾಲ ವಿಠ್ಠಲನು ।
ಘಟ್ಟಿಯಾಗಿ ಮುಕ್ತರೊಡನಾಡುವಾ ॥೫॥

ಅಟ್ಟತಾಳ

ವರಣಾಶ್ರಮಗಳುಂಟು ವರಣ ಬಾಹ್ಯರು ಉಂಟು ।
ಪರಿ ಪರಿ ಸ್ಥಾವರ ಜೀವರುಗಳು ಉಂಟು ।
ಇರುವರು ಇದ್ದಲ್ಲೆ ಸ್ಥಾವರ ಜೀವರು ।
ತಿರಿಗಿ ಆಡುವರಲ್ಲ ಇದ್ದಲ್ಲೆ ಆನಂದ ।
ಹರುಷ ಬಡುವರಿನ್ನು ಸ್ವರೂಪದಿಂದಲೆ ।
ತರತಮ ಜೀವರು ಅಲ್ಲಿ ಉಂಟು ।
ಪರಿ ಪರಿ ಶುದ್ಧ ಸತ್ವಗಳನೆ ಕೊಂಡು ।
ಮರಗಳು ನಾನಾಕುಲತೆಯು ರೂಪವಾಗಿ ।
ಪರಿವಾರ ಸುರರಿಂದ ಬೆರೆದು ಹರಿಯು ತಾನು ।
ಹೊರಗೆ ಪೊರಟು ತಾನು ಸಂಚರಿಸುತ್ತ ।
ಸಿರಿಯಿಂದ ಸುರರುಗಳಿಂದಾಡೊ ಪರಿ ಕ್ರೀಡಿಗನುಕೂಲ ।
ಪರಿ ಪರಿ ಪುಷ್ಪ ಫಲವು ರಸ ಗಂಧವು ।
ಹರಿಯು ಕ್ರೀಡಿಗೆ ಅನುಕೂಲರಾಗಿ ನಾನಾ ಕುಸುಮ ।
ಸಿರಿ ತುಲಸಿ ಮುಂತಾದ ಮರಗಳು ಆಗಿ ।
ಹರಿಯು ಸೇವಿಸಿ ಪುನಃ ಇರುವರು ಇದ್ದಲ್ಲೆ ।
ಸಿರಿ ಶಂಖ ಚಕ್ರಧಾರಿಗಳು ಮುಕ್ತಿವರಲ್ಲ ।
ಮರಗಳು ನಿರುತ ತದಾಕಾರರು ।
ಎರಡು ವಿಧರು ಉಂಟು ಸಾಂಶ ನಿರಂಶ ।
ಇರುತಿಪ್ಪರು ಸ್ಥಾವರರು ಜೀವಿಗಳಿನ್ನು ।
ಹರಿಯು ಸೇವಿಸುತಲಿ ತಮ್ಮ ಶಕ್ತ್ಯಾನುಸಾರ ।
ಪರಿಪರಿ ಆನಂದ ಅನುಭೋಗಿಸುತಲಿ ।
ಸಿರಿ ಮಹಾರಾಜ ಗೋಪಾಲ ವಿಠ್ಠಲರೇಯ ।
ಪರಿ ಪರಿ ರೂಪನಾಗ್ಯವರ ಪಾಲಿಸುವ ॥೬॥

ಆದಿತಾಳ

ಬಿಂಬನಾಗಿ ಪ್ರತಿಬಿಂಬಗಳಂತೆ ರೂಪ ।
ಎಂಭತ್ತುನಾಲ್ಕುಲಕ್ಷ ಯೋನಿ ಜೀವರಾಶಿ(ಗಳಿ)ಗೆ ।
ಬಿಂಬನಾಗಿ ಶ್ರಿಹರಿ ಇಂಬಾಗಿ ತದಾಕಾರ ।
ಬಿಂಬನಾಗಿ ವೊಳಗೆ ಯಿದ್ದು ಅವರು ಏನು ।
ಹಂಬಲಿಪರಾನಂದ ಸಂಭ್ರಮ (ದೊ) ಒದಗಿಪ್ಪ ।
ಗಂಭೀರ ಗುಣಭಕ್ತರ ಹೊರವ ಕು ।
ಟುಂಬಿ ಎನಿಪಾನಂದಾಂಬುಧಿಯು ।
ಡಂಬ ಜೀವರ ಗತಿ ಸಂಭ್ರಮವು ।
ಉಂಬೊ ಅಪಾರ ಸುಖಜ್ಞಾನ ಮುಕ್ತರಿಗುಂಟು ।
ಬಿಂಬನಾದ ಶ್ರೀಹರಿ ತಿಳಿಸಿಕೊಡುವ ।
ಕಾಂಬೊದೆ ಮಾತ್ರ ಭೋಗವೆಂಬನುಭಾವರಲ್ಲಾ ।
ತುಂಬಿದಾನಂದಾ ಪೂರ್ಣರಿವರು ನೋಡು ।
ಹೊಂಬಣ್ಣ ವಸ್ತ್ರ ಕಂಬಳಿ ಕಟ್ಟಿದ ಕ್ಷಣ ।
ಕಂಬಳಿಯು ಬಣ್ಣವು ಹೊಂಬಣ್ಣ ಸೇರುವದೆ ।
ಕುಂಭಿಣಿಯಲ್ಲಿ ವೃತ್ತಿ ಸುಖ ದುಃಖ ಅ ।
ನುಭವ ವೆಂಬ ಜ್ಞಾನವುಂಟು ಭೋಗವು ಯಿಲ್ಲ ।
ಬಿಂಬ ಹರಿಗಿಲ್ಲ ಎಂಬೊದೇನಾಶ್ಚರ್ಯ ।
ಸಂಭ್ರಮ ಪದ ಮೂರ್ತಿ ಗೋಪಾಲ ವಿಠ್ಠಲ ।
ಅಂಬುಜನಾಭನ ಪಾದಕ್ಕೆ ನಮೊ ನಮೊ ॥೭॥

ಜತೆ

ಚಿತ್ರವಿಚಿತ್ರ ಮುಕ್ತರ (ಕ್ರೀಡಿಪನು ಬಲು)ಕ್ರೀಡ್ಯಾವನು ಬಲ್ಲ ।
ಮುಕ್ತಿದಾಯಕ ಗೋಪಾಲ ವಿಠ್ಠಲ ಬಲ್ಲ ॥೮॥

## ಸುಳಾದಿ ೪.

ಶ್ರೀ ಹರಿಯ ಅಷ್ಟ ಕರ್ತೃತ್ವ, ಪ್ರಳಯಾದಿ ಸೃಷ್ಟಿ, ಸ್ಥಿತಿ, ಸಂಕ್ಷಿಪ್ತವರ್ಣನಾ, ಸೃಷ್ಟಿಗೆ ತಂದ ಮೇಲೆ ಜೀವರಿಗೆ ವಿಷಯಾದಿಗಳಲ್ಲಿ ಸಹ ಹರಿಯಚಿಂತನಾ ಕೊಡಲು ಪ್ರಾರ್ಥನೆ.

ರಾಗ ಭೈರವಿ, ಧ್ರುವತಾಳ

ಎಲೊ ಎಲೊ ಸರ್ವಜ್ಞ ಸರ್ವೋತ್ತಮ ಶ್ರೀಹರಿ ।
ಚಲುವ ಸಾಕಾರ ಸಚ್ಚಿದಾನಂದ ಸಗುಣ ರಹಿತಾ ।
ಇಳಿಯ ನೆಲ್ಲವ ನುಂಗಿ ಇನಿತು ಈಡಾದೆ ನಿನ್ನ ।
ಬಲು ಉದರದಿ ಎಲ್ಲರನು ಅಡಿಗಿಸಿ ।
ಲಲನೆ ಲಕುಮಿ ತಾನೆ ಮೂರು ಬಗೆಯು ಆಗಿ ।
ಚಲುವಾ ನಿನ್ನ ಸೇವಿಪಳಾಕಾಲದಿ ।
ಪ್ರಳಯೋದಕ ಸಿರಿ ವಟಪೆಲೆಯು ಭೂರೂಪಳಾಗಿ ।
ಬೆಳಕು ತೋರದೆ ದುರ್ಗೆ ತಮರೂಪಳಾಗೆ ಇನ್ನು ।
ಸುಲಭ ರೂಪದಿ ನೀನು ಎಲಿಯು ವಟದ ಮೇಲೆ ।
ಮಲಗಿ ಬಾಲಕನಾಗಿ ಮತ್ತೆ ಎಲ್ಲವ ಬಿಟ್ಟು ।
ಕಿಲಿ ಕಿಲಿ ನಗುತಲಿ ಕಾಲ್ಬೆರಳು ಬಾಯೊಳಗಿಟ್ಟು ।
ನಲಿದು ಚಪ್ಪರಿಸುವೆ ತಿಳಿದು ತಿಳಿದು ಇನ್ನು ।
ಕಲಕಾಲವು ಭಕ್ತರು ಮಾಡಿದ ಸತ್ಕರ್ಮಂಗಳು ।
ಹಲವು ಪರಿ ಭಕ್ತಿಯು ಮಾಡಿ ಅರ್ಪಿಸಿದದೆಲ್ಲ ।
ಕೊಳುತ ಅವರ ರುಚಿಗಳನು ಎಲ್ಲವು ನೋಡಿ ।
ನಿಲಿಸುವಿ ಅವರವರ ನಿಜಪದವಿಯಲ್ಲಿ ಸ್ವಾಮಿ ।
ಭಳಿರೆ ಭಕ್ತವತ್ಸಲ ಗೋಪಾಲ ವಿಠ್ಠಲ ।
ನಿಲಿಸಿ ಎನ್ನಲ್ಲಿ ನಿರುತ ಲೀಲೆ ತೋರಿಸು ಧೊರಿಯೆ ॥೧॥

ಮಟ್ಟತಾಳ

ಏಕಾಂತದಿ ಯಿಪ್ಪ ಲೋಕನೆಲ್ಲವ ನಿನ್ನ ।
ಆ ಕುಕ್ಷಿಯೋಳಿಟ್ಟು ಸಾಕುತ್ತ ಸರ್ವರ ।
ನೀ ಕರುಣಿಸಿ ಮುಖ್ಯ ಪ್ರಾಣನೊಬ್ಬಗಿನ್ನು ।

ಬೇಕಾದ ಎಚ್ಚರಿಕೆನಿತ್ತು ಸಕಲ ಜೀವ ।
ಜೋಕೆ ಮಾಡುವಿ ಇನ್ನು ಸ್ಪೃಜ್ಞ ಅಸ್ಪೃಜ್ಞರನು ।
ಸಾಕಲ್ಯ ಗುಣಪೂರ್ಣ ಗೋಪಾಲ ವಿಠ್ಠಲ ।
ನೀ ಕರುಣಿಸುವೆಮ್ಮ ನಿರ್ವ್ಯಾಜದಿ ನಿರುತ ॥೨॥

ರೂಪಕ ತಾಳ

ಅನಾದಿ ಜೀವಲಿಂಗ ಬದ್ಧರಗಳ ನುಂಗಿ ।
ತಾನಿಪ್ಪೆಸಾರು (ಪ್ಪಸಾರ) ಸುಪ್ತಾವಸ್ಥೆ ಯೋಪಾದಿ ।
ಜ್ಞಾನ ಅಜ್ಞಾನವು ಎರಡನ್ನು ಅರಿಯದೆ ।
ಜ್ಞಾನ ಸ್ವರೂಪವೆ ಆಚ್ಛಾದವಾಗಿರೆ ।
ಪ್ರಾಣಿಗಳನು ನಿನ್ನ ದೃಷ್ಟಿಯಿಂದಲಿ ।
ನೀ ನೆಚ್ಚಿಸಿನ್ನು ಉದ್ಧಾರ ಮಾಡುವೆನೆಂದು ।
ನಾನು ನನ್ನದು ಎಂಬೊ ಅಹಂಮತಿಯನೆ ಕೊಟ್ಟು ।
ನಾನಾ ಯೋನಿಗಳಲ್ಲಿ ತಂದ್ಹಾಕುವೆ ।
ಮಾನವ ಜನುಮದಿ ಮಹಾಸಾಧನವು ತೋರಿ ।
ಪ್ರಾಣಿಯು ನಿನ್ನ ತಿಳವಂತೆ ಮಾಳ್ಪೆ ।
ಜಾಣ ಚನ್ನಿಗರಾಯ ಗೋಪಾಲ ವಿಠ್ಠಲ ।
ಕಾಣಿಸದನಕ ಕಾಣರು ನಿನ್ನ ॥೩॥

ಝಂಪೆತಾಳ

ಅನಂತ ಜನುಮದಲ್ಲಿ ಅನಂತ ಕಲ್ಪದಲ್ಲಿ ।
ಇನ್ನು ಮಾಡಿದೆನಯ್ಯಾ ನಿನ್ನ ಪ್ರೇರಣೆಯಿಂದ ।
ಕಿನ್ನು ಮಾಡುವನಾಗಿ ಮತ್ತೆ ಇಪ್ಪೆವೆನಯ್ಯಾ ।
ಅನಂತ ಪಾಪಕ್ಕೆ ಅನಂತ ನಿನ್ನ ನಾಮಾ ।
ಎನ್ನ ಬಳಿಯಲ್ಲಿ ಈಗ ವಾಸವಾಗೆವೊ ಅಯ್ಯಾ ।
ಎನ್ನ ದೋಷಗಳೆಂಬೊ ಇನ್ನು ಅರಿಸಿ ಅರಿಸಿ ।
ನಿನ್ನದೊಂದು ಸಾಕು ನಾಮ ಅದರನು ಕೆಡಿಸು ।
ಇನ್ನು ಅವಕೆ ಅಂಜೆ ಈ ಶಕುತಿ ಎನಗಿರಲಿ ।

ಘನ್ನ ದಯಾನಿಧೆ ಗೋಪಾಲ ವಿಠ್ಠಲ ।
ನಿನ್ನ ಬಿಡೆ ನಿನ್ನ ಬಿಡೆ ನಿತ್ಯ ತೃಪ್ತ ॥೬॥

ತ್ರಿವಿಡಿತಾಳ

ಒಂದು ಶ್ರವಣದಿಂದ ಆವದಾಗುವ ದೆಸಗೆ ।
ಛಂದದಿ ಪಾಲಿಸು ಆ ಶ್ರವಣವ ।
ಒಂದೆ ಸ್ನಾನದಲಿಂದ ಆವದು ಧರಿಪದು ।
ಛಂದದಿ ಮಾಡಿಸೊ ಅದೆ ಸ್ನಾನವ ।
ಒಂದೆ ಮಂತ್ರದಲಿಂದ ಆವ ಸಿದ್ಧಿಯೊ ಎನಗೆ ।
ಛಂದದಿಂದಲಿ ಪಾಲಿಸೊ ಅದೆ ಮಂತ್ರವ್ರೊ ।
ಒಂದೆ ಗುರುವಿನಿಂದ ಆವ ಉದ್ಧಾರವ್ರೋ ।
ತಂದು ತೋರಿಸು ಮತ್ತೆ ಅದೆಗುರುವಿನ ।
ಒಂದೆ ನಿನ ಮೂರುತಿ ಆವದೆನಗೆ ತಿಳಿಯೆ ।
ತಂದು ತೋರಿಸು ಎನ್ನ ಅನುಭವಕ್ಕೆ ।
ಒಂದೆ ಅರ್ಚನೆಯಿಂದ ಆವದೊ ನಿನ್ನ ಪೂಜೆ ।
ಛಂದದಿ ತೋರಿಸೊ ಅದೆ ಬಗಿಯ ।
ಒಂದೆ ಪರಿಯು ಮನಕೆ ಆವದು ನಿಲ್ಲೋದೊ ।
ಛಂದದಿ ಪಾಲಿಸು ಅದೆ ಜ್ಞಾನವು ।
ಸಂದೇಹದ ಕರ್ಮ ಸಾಸಿರ ಕೊಟ್ಟರು ।
ಮಂದ ಬುದ್ಧಿ ಯವಕಡೆ ಬೀಳಿಸೋ ।
ಒಂದು ಕರ್ಮವು ಮಾಡೆ ಮತ್ತಾನಂತ ಕರ್ಮ ।
ಬಂದು ಒದಗುತಿವೆ ಸಂದೇಹ ಗೊಳಿಸುತ ।
ಬಂಧಕವೆ ಮತ್ತೆ ಬಲಿಕೆ ಮಾಡುತಲಿವೆ ।
ಎಂದಿಗೂ ಕಡೆ ಹಾಯುವದು ಅರಿಯದೆ ।
ಮಂದರಧರ ನಮ್ಮ ಗೋಪಾಲ ವಿಠ್ಠಲ ।
ತಂದೆ ಸಲಹೊ ನಿನ್ನ ಸಂದರುಶನ ಕೊಟ್ಟು ॥ ೫ ॥

ಅಟ್ಟತಾಳ

ಎಲ್ಲಿ ತನಕ ವಿಷಯ ವೆಗ್ಗಳಿಸುವಿ ಇನ್ನು ।
ಅಲ್ಲಿ ತನಕ ಮನ ನಿಲ್ಲದು ನಿನ್ನಲ್ಲಿ ।

ಜ್ವಲ್ಲಿಸುತ ಯಿಪ್ಪ ಬಲ್ಲಿದಗ್ನಿಯು ಮೇಲೆ ।
ಹುಲ್ಲು ಹಾಕುತ ಬರೆ ನಿಲ್ಲುವದೆ ತಾಪ ।
ಎಲ್ಲ ಕಾಲವು ವಿಷಯದಲ್ಲೆ ಮನಸು ಪೋಗಿ ।
ಸಲ್ಲಿ ಸಲ್ಲಿಸಿ ಸಾಕು ಎಂಬುವಂಥ ।
ಅಲಂ ಬುದ್ಧಿಯು ಇನ್ನು ಯಳ್ಳಿನಿತು ಇಲ್ಲಾ ।
ಕೊಲ್ಲುತದೆ ಕೊಂಡು ಪೈದು ವಿಷಯಂಗಳ ।
ಗೆಲ್ಲಿ ತನಕ ಹೀಗೆ ಎಳೆದರೆ ನಾನಿನ್ನ ।
ಗೆಲ್ಲುವ ತೆರನೆಂತು ಬಲ್ಲಿದ ಎಲೆದೇವ ।
ನಿಲ್ಲಿಸಿ ಈ ಪಾಪ ಸಂಚಿತ ಕೆಡಿಸಿನ್ನು ।
ಮೆಲ್ಲನೆ ಬಾಹೊ ಆಗಾಮಿಯಾ ಪ್ರೊತ್ತಿನ್ನು ।
ಸಲ್ಲಿಸು ಪ್ರಾರಬ್ಧ ಇಲ್ಲಿಗೆ ಪಂತೆಂದು ।
ಎಲ್ಲ ಮನಕೆ ಆಯು ಆರವಿಸಿ ಚೆನ್ನಾಗಿ ।
ನಿಲ್ಲದೆ ನೀ ಸ್ಮರಣೆಗೆ ಬರುತ ಲಿದ್ದು ।
ನಲ್ಲಾ ನೀ ಕಾಯು ಬೇಕಲ್ಲದೆ ಎನ್ನನು ।
ಮಲ್ಲ ಮರ್ದನ ಗೋಪಾಲ ವಿಠ್ಠಲ ।
ಕೊಲ್ಲೊ ಕಾಯೊ ಬಿಡೊ ನಿನ್ನ ನಂಬಿದೆನೊ ॥ ೬ ॥

ಆದಿತಾಳ

ವಿಷಯ ಬಂಧುಗಳಿನಗೆ ವಿಷಯರು ಆರೆರೆ ।
ವಶವಾಗಿ (ಗುಪಿ ಎಂತೊ) ವೆಂತೊ ಮುಖ್ಯ ವಿಷಯು ನೀನು ।
ಕೆಸರೊಳಗೆ ಬಿದ್ದು ಕೆಸರಿಂದ ತೊಳೆದರೆ ।
ಹಸನಾಗೊದೆಂತೊ ಅವು ಕುಶಲ ಮೂರ್ತಿ ।
ಕಸುಗಾಯಿ ಎಂಬುವಂಥ ಬಿಸಿಲಿಲಿ ಬಡಿಸಿಕೊಂಡು ।
ರಸ ಪಕ್ವ ವಾಗಿನ್ನು ದ್ರವಿಸುತ ಶ್ರೀಹರಿಯೆ ।
ವಿಷಯ ವಾಗಲೊ ಮುಖ್ಯ ನಿನಗೆ ನಿರುತ ।
ವಸುದೇವ ಸುತ ನಮ್ಮ ಗೋಪಾಲ ವಿಠ್ಠಲ ।
ಅಸಮ ದೈವವೆ ನಿನಗೆ ನಮೋ ನಮೋ ನಮೊ ಎಂಬೆ ॥ ೭ ॥

ಜತೆ

ಎಲ್ಲಿತನಕ ಮನಸು ಎರಗುತಿಪ್ಪದು ಎನಗೆ ।
ಅಲ್ಲಲ್ಲಿ ವಿಷಯನಾಗೊ ಗೋಪಾಲ ವಿಠ್ಠಲಾ ॥ ೮ ॥

## ಸುಳಾದಿ ೫

ಪ್ರಮೇಯ. ಸತ್ಯಾದಿ ಅಷ್ಟಪುಷ್ಪಗಳು ಜೀವನ ಧರ್ಮಗಳಲ್ಲ ಜೀವರನ್ನು ಎಂದೆಂದಿಗೂ ಆಗಲದಿಪ್ಪ ಶ್ರೀಹರಿಯ ಗುಣಕ್ರೀಯಾಗಳನ್ನು ತಿಳಿದು ಅಷ್ಟಪುಷ್ಪಗಳನ್ನು ಹರಿಗೆ ಅರ್ಪಿಸು—

ರಾಗನಾಟಿ ಧ್ರುವತಾಳ

ಭಾವಾಷ್ಟ ಪುಷ್ಪಂಗಳು ದೇವಗೆ ಅರ್ಪಿಸುವ ।
ಭಾವನೆಯನು ಕೇಳಿ ಭಕ್ತಜನರು ।
ಜೀವರಿಂದ ಈ ಧರ್ಮ ಎಂದಿಗೆ ಆದದಲ್ಲ ।
ದೇವನಲ್ಲೇವೇ ಇಂಥ ಗುಣಗಳುಂಟು ।
ಭಾವಾಷ್ಟಾ ಪುಷ್ಪಗುಣವ ದೇವನಲ್ಲಿಪ್ಪವೆಂದು ।
ಜೀವ ತಿಳಿದರೆ ಉದ್ಧರ ಉಂಟು ।
ಜೀವರೆಂಬುವರು ಕರ್ಮಬದ್ಧರು ಇನ್ನು ।
ದೇವನು ಕರ್ಮಣ ತ್ರಿಗುಣರಹಿತ ।
ಜೀವರಿಂದಲಿ ಅತ್ಯಂತ ಭೇದ ಸಾಕಾರಹರಿ ।
ಯಾವತ್ತರಾದಿ ವ್ಯಾಪ್ತ ಎಣೆಯಿಲ್ಲದ ಮೂರ್ತಿ ।
ಪಾವನಾಂಗ ಪಾಪನಾಶ ನಿತ್ಯತೃಪ್ತಾ ।
ಜೀವಜಡದಿ ಎಂದಿಗೆ ಆಗಲದೆ ಇಪ್ಪ ।
ಈ ವಿಧ ಶಕುತಿಯು ಈಶ ಗೋಪಾಲ ವಿಠಲ ।
ದೇವರಿಗುಂಟೆಂದು ಅರಿವ ಜೀವನೆ ಬಲುಧನ್ಯ ॥೧॥

ಮಟ್ಟತಾಳ

ಬೊಮ್ಮಾಂಡವ ಸೃಜಿಸಿ ಬೊಮ್ಮನೊಳಗೆ ನಿಂತು ।
ಸುಮ್ಮನಸರನೆಲ್ಲ ನಿರ್ಮಿಸಿ ಪಾಲಿಸಿ ।

ಬೊಮ್ಮಾಂಡ ಅಳಿಸಿ ಬೊಮ್ಮನ ಕೊಲ್ಲುವ ।
ಬೊಮ್ಹತಿದೋಷವು ಎಮ್ಮಯ್ಯಗಿಲ್ಲ ।
ಹಮ್ಮಿನ ಕಂಸ ಡಿಬಿಕರ ।
ನಿರ್ಮಳದಿ ಕೊಂದ ನಿರ್ಮತ್ಸರದಿಂದ ।
ಧರ್ಮದಿ ಪುಷ್ಟ ನಮ್ಮಯ್ಯಗೆಂದೂ ।
ಘಮ್ಮನೆ ಅರ್ಪಿಸು ಘನಭಕುತಿಯಲ್ಲಿ ।
ರಮ್ಮೆ ರಮಣನೆ ಗೋಪಾಲ ವಿಠ್ಠಲ ಪರ ।
ಬೊಮ್ಮ ಒಲಿವ ಹೀಗೆ ಧರ್ಮ ಅರಿದವರಿಗೆ ॥೨॥

ರೂಪಕತಾಳ

ಎರಡೆಂಟು ಸಾಸಿರ ಅರಸಿಯರಕೂಡ ।
ಪರಿಪರಿ ಕ್ರೀಡೆಯು ಮಾಡಿನೋಡಿ ಚಲ್ವ ।
ತರುಳತನದಿ ಹನ್ನೆರಡು ಸಾಸಿರ ಮಂದಿ ।
ತರುಳರಪಡೆದು ತಾ ಪರಿಕ್ಷಿತನಿಗೆ ಇನ್ನು ।
ಪರಿಣಾಮ ಮಾಡಿದವರ ಬ್ರಹ್ಮಚಾರಿ ಎಂದು ।
ಸರಿ ಹೋಗುವದೆ ಇಂಥ ಚರಿಯು ಮನುಜರಿಂದ ।
ಹರಿಗೆ ಇಂದ್ರಿಯ ನಿಗ್ರಹ ಸ್ಥಿರ ಪುಷ್ಪವೆಂತೆಂದು ।
ಅರಿದು ಅರ್ಪಿಸುವ ಜೀವರಿಗೆ ಲೇಪಿಸದು ।
ಪರಮ ದಯಾಳು ಗೋಪಾಲ ವಿಠಲ ತನ್ನ ।
ಅರಿದಂತೆ ಫಲವೀವಾ ಶರಣ ಜನಕೆ ॥೩॥

ಝಂಪಿ ತಾಳ

ಭೂತ ದಯಾ ಪುಷ್ಪ ಭೂತೇಶಗಲ್ಲದೆ ।
ಭೂತಾಧಾರದಿ ಇಪ್ಪ ಭೂತರಿಗೆ ಥರವೆ ।
ನೀತಿಲಿ ತ್ರಿವಿಧ ಜೀವರಿಗೆ ತಾ ತಪ್ಪದೆ ।
ಪ್ರೀತಿಲಿ ಉಣಿಸಿ ಅಜಾತನಾಗಿ ಇಪ್ಪ ।
ಮಾತು ಮಾತಿಗೆ ಅನಂತ ಕರ್ಮಂಗಳು ।
ಜ್ಞಾತವಿಲ್ಲದೆ ಮಾಳ್ಪ ಜೀವರಿಗೆ ಇದು ಸಲ್ಲ ।
ಭೂತರುಗಳ ಗತಿ ತಾ ತಿಳಿದು ತ್ರಿವಿಧರಿಗೆ ।

ನೋಕ್ತ ಫಲ ವಿತ್ತು ಸಮನಾಗಿ ಇಪ್ಪವನೆಂದು ।
ಈ ತೆರದಿ ತಿಳಿದು ನೀ ಭೂತ ದಯಾ ಪುಷ್ಪ ।
ಪ್ರೀತಿಯಲಿ ಅರ್ಪಿಸನ್ಯಥಾ ಚಿಂತಿಸದೆ ।
ದಾತ ನಮ್ಮ ಸ್ವಾಮಿ ಗೋಪಾಲ ವಿಠ್ಠಲ ।
ಸೋತ್ರೆನೆಂದ ಬಳಿಕ ಸಲಹದೆ ಬಿಡನು ॥೪॥

ತ್ರಿವಿಡಿ ತಾಳ

ಸರ್ವದಾ ಕ್ಷಮೆ ಪುಷ್ಪ ಸರ್ವೇಶಗಲ್ಲದೆ ।
ಗರ್ವ ತತ್ವಾದಿ ಬದ್ಧ ಜೀವರಿಗೆ ಸಲ್ಲ ।
ಶರ್ವಸಲ್ಯಾದ್ಯರು ಸಹಿಸಿಲ್ಲ ಈ ಕರ್ಮ ।
ಪೂರ್ವದ ಆಖ್ಯಾನ ಇದಕೆ ಉಂಟು ।
ಸರ್ವ ಉತ್ತಮ ದೇವನಾರೆಂದು ಭೃಗುಮುನಿ ।
ಸರ್ವ ಪೂರ್ಣ ಹರಿಯು ಎದಿಯು ಮದ್ದ ।
ಪರ್ವತದೋಪಾದಿ ಇದ್ದ ಕಾರಣವಾಗಿ ।
ಸರ್ವೋತ್ತಮನೆಂದು ತುತಿಸಿ ನಲಿದಾ ।
ನಿರ್ವ್ಯಾಜದಿಂದಲಿ ನಿತ್ಯ ಕೋಪದಿ ಹೀನ ।
ಗರ್ವತತ್ವಾದಿ ಬದ್ಧ ಜನರಿಗೆ ಕೂಡದು ।
ಸರ್ವಾನಂದ ಪೂರ್ಣ ಗೋಪಾಲ ವಿಠಲ ।
ಸರ್ವೇಶಗೀ ಪುಷ್ಪ ಅರಿವ ಜೀವನೆ ಧನ್ಯ । ॥೫॥

ಅಟ್ಟ ತಾಳ

ದಮ ಜ್ಞಾನ ಧ್ಯಾನವು ಸಮೀಚೀನ ಪುಷ್ಪವು ।
ರಮೆ ಈಶ ಗಲ್ಲದೆ ಪ್ರಮಿಸೋ ಜೀವರಿಗಿಲ್ಲ ।
ಯಮನ ಕಂಡರೆ ಅಂಜೋ ಭ್ರಮಣ ಜೀವರಿಗೆ ।
ದಮ ಎಂಬ ಪುಷ್ಪವು ಎಂತು ದೊರೆಯುವದಯ್ಯ ।
ಸುಮತಿ ಜಡದಲ್ಲಿ ನಿಮಿಷ ಬಿಡದೆ ಇದ್ದ ।
ಹಸ್ಮೃತಿ ಜೀವನಿಗೆ ಜ್ಞಾನ ಪುಷ್ಪವು ಎಂತೋ ।
ಕ್ಷಮಿಸಿ ನೋಡಲು ಧ್ಯಾನ ಪುಷ್ಪವೆಂಬೊದು ಅಂತು ।
ನಿಮಿತ್ಯ ಮಾತ್ರವು ಇದು ನೀಚಜೀವರಿಗಿಲ್ಲ ।

ಸಮ್ಮತಿಸಿ ನೋಡಿವು ಸರ್ವೋತ್ತಮನಲ್ಲವೆ ।
ನಿಮಿಷಬಿಡದೆ ಯಿಪ್ಪನೆಂದು ಚಿಂತನೆಮಾಡೆ ।
ದಮ ಜ್ಞಾನ ಧ್ಯಾನವುಳ್ಳವನಾಗುವನಾಜೀವ ।
ಸುಮನಸರೊಡಿಯ ಗೋಪಾಲ ವಿಠಲನು ।
ನಮಿಸಿ ನೆಚ್ಚಿದಂಗೆ ನರಿಸುವಾನಿವರಃ ||೬||

ಆದಿತಾಳ

ಸತ್ಯವೆಂಬುವ ಪುಷ್ಪಸರ್ವೇಶಗೆ ಇದು ।
ನಿತ್ಯ ಅನೃತ ನುಡಿವ ಜೀವಗೆಸಲ್ಲ ।
ಕತ್ತಲೆವೊಳಗಿದ್ದ ಮತ್ತೆ ಉದಯವೆಂಬೊ ।
ಮಿಥ್ಯವಚನವಾಡಿ ಸುತ್ತುವ ಸಂಸಾರ ।
ಮತ್ತೆ ಇವಗೀ ಪುಷ್ಪ ಎಂತು ದೊರುವದಯ್ಯಾ ।
ಸತ್ಯ ಸಂಕಲ್ಪ ನಮ್ಮ ಗೋಪಾಲ ವಿಠಲಗೆ ।
ಮತ್ತೆ ನೀ ಉಂಟೆಂದು ಮನಮುಟ್ಟಿತಿಳಿಯೋ ||೭||

ಜತೆ

ಭೇದವಿಲ್ಲದಿ ಪುಷ್ಪಇಪ್ಪವು ಹರಿಯಲ್ಲಿ ।
ಸಾಧಿಸರ್ಚಿಸು ಗೋಪಾಲ ವಿಠಲ ವೊಲಿವಾ ||೮||

## ಸುಳಾದಿ ೬

ಶ್ರೀ ಹರಿಯ ಗುಣೋಪಸಂಹಾರ ಉಪಾಸನೆಯಿಂದ ಜೀವನು ಆಯಾ ದೋಷಗಳಿಂದ ಮುಕ್ತನಾಗುವನು. ಹರಿ ಸರ್ವೋತ್ತಮನೆಂದು ತಿಳಿದು ನಿಶ್ಚೈಸಿದ ಭಕ್ತನಿಗೆ ನಿರಯವಿಲ್ಲ ಇತ್ಯಾದಿ ಪ್ರಮೇಯ, ತ್ರಿವಿಧ ಬಿಂಬ, ವಿಚಾರ, ಮತ್ತು ಸಾಧನ ವಿಚಾರ.

ರಾಗ ಮನದಿಚ್ಛೆ ಧ್ರುವತಾಳ

ಎಲಲ್ಯಾ ದೋಷಂಗಳೆ ನಾನಿರ್ದೋಷನಾಶ್ರಿತನು ।
ಎಲೆಲೆ ದುರಿತವೆ ನಾನು ಬಲಪೂರ್ಣಾಶ್ರಿತನು ।
ಎಲೆಲೆ ಸುಖವೆ ನಾನು ಪೂರ್ಣಾನಂದನ ಆಳು ।
ಎಲೆಲ್ಯಾ ಅಜ್ಞಾನವೆ ನಾ ಜ್ಞಾನಪೂರ್ಣನಾಶ್ರಿತನು ।

ಎಲೆಲೆ ಕಾಮವೆ ನಾನು ಪೂರ್ಣ ಕಾಮನ ಆಳು ।
ಎಲೆಲಾ ಕ್ರೋಧವೆ ನಾನು ಅಚ್ಯುತ ಕರುಣಾಕರನಾಳು ।
ಎಲೆಲಾ ಮೋಹವೆ ನಾನು ವ್ಯಾಪ್ತ ವಿಷ್ಣುವಿನ ಆಳು ।
ಎಲಿಲಾ ಲೋಭವೆ ನಾನು ಸಾರ್ವಭೌಮನ ಆಳು ।
ಎಲೆಲಾ ಮದವೆ ನಾನು ನಿರಹಂಕಾರಿಯಾಶ್ರಿತನು ।
ಎಲೆಲಾ ಮತ್ಸರವೆ ನಾನು ಕುಟಿಲರಹಿತನ ಆಳು ।
ಎಲೆಲಾ ನಿದ್ರಿಯೆ ನಾನು ಅನಿದ್ರಿಯನಾಳು ।
ಎಲೆಲಾ ಹಸಿವೆ ತೃಷಿಗಳೆ ನಾ ನಿತ್ಯ ತೃಪ್ತನ ಆಳು ।
ಸುಳಿಯ ಬೇಡಿನ್ನು ನೀವು ಸುತ್ತಲಾದರು ಎನ್ನ ।
ಬಲವಂತನಾದ ಹರಿಯ ಬಿಂಬಾಶ್ರಿತ ।
ಸ್ಥಳ ವಿಲ್ಲಾ ನಿಮಗೆ ನಿಲ್ಲಾ ಎನ್ನಲ್ಲಿ ನೋಡಲು ।
ತೊಲಗಿರಿ ತೊಲಗಿತ್ತೆ ಸುಳಿಯದಲೆ ।
ಮಲತ ಮಲ್ಲರ ಗಂಡ ಗೋಪಾಲ ವಿಠಲ ।
ಹಲವು ಪರಿಯಲಿ ನಮ್ಮ ಸಲಹೊದೇವಾ ।

ಮಟ್ಟತಾಳ

ಗುಣಪೂರ್ಣ ಸುಖ ಪೂರ್ಣ ಅಣುಮಹಾದೊಳು ವ್ಯಾಪ್ತ ।
ಕ್ಷಣಲವ ತೃಟಿಕಾಲ ಕೊರತಿಯಿಲ್ಲವುಕಾಣೆ ।
ಗುಣ ಬದ್ಧನು ಅಲ್ಲ ಕೇವಲ ನಿರ್ಗುಣಾ ।
ಅಣುಮಾತುರ ವನ್ನ ಭಿನ್ನ ವಿಷಯರಹಿತಾ ।
ಅನ್ಯೋನ್ಯವಾಗೆ ಜೀವಜಡದಲಿದ್ದು ।
ಇನ್ನು ಕ್ರೀಡೆಯು ಮಾಳ್ಪ ಚಿನ್ನುಮಯನಾಗಿ ।
ತನ್ನ ಆನಂದಕ್ಕೆ ಲೇಶ ಕೊರತೆಯಿಲ್ಲಾ ।
ಇನ್ನು ಜೀವರಿಗಾಗಿ ಸಕಲ ಕ್ರೀಡೆಯು ಮಾಳ್ಪಾ ।
ಪುಣ್ಯಪಾಪಗಳಿಂದ ವಿಲಕ್ಷಣನಯ್ಯಾ ।
ಇನ್ನೇ ನೊರ್ನಿಸುವೆ ಇವನ ಮಹಾಮಹಿಮೆ ।
ಅನಂತ ಗುಣಪೂರ್ಣಲಕುಮಿಗಾಗೋಚರ ।
ಎನ್ನಾಳುವ ಸ್ವಾಮಿಗೋಪಾಲ ವಿಠಲ ।
ತನ್ನ ನಂಬಿದವರ ತನ್ನ ಸದೃಶರ ಮಾಳ್ಪಾ ॥೨॥

ರೂಪಕತಾಳ

ನಿತ್ಯತ್ವ ನಿರ್ದೋಷ ನಿರ್ಗುಣ ಶ್ರೀಯುಕ್ತ ।
ಚಿತ್ತ್ವ ಭೃತ್ಯ ಭಾವವನೆ ಆನಂದ ಬಲ ।
ಸತ್ವ ಜೀವರಲ್ಲಿ ಬಿಂಬ ಸದ್ವ್ರತ ಉಂಟು ।
ನಿತ್ಯ ಸಂಸಾರಿಗೆ ನಿತ್ಯತ್ವದಲ್ಲಿ ಮಾತ್ರ ।
ಮತ್ತಾವ ತಾಮಸ ಜೀವರ್ಗೆ ಸಾದೃಶ್ಯ ।
ನಿತ್ಯತ್ವ ನಿರ್ಗುಣ ಎರಡು ವಿಧ ಉಂಟು ।
ಸತ್ಯ ಜ್ಞಾನಿಗೆ ಸುಖ ಮಿಥ್ಯಾ ಜ್ಞಾನಿಗೆ ದುಃಖ ।
ವ್ಯಕ್ತಿ ಆಪುದು ಕೇವಲ ನಿರ್ಗುಣದಾಗಾ ।
ಸತ್ಯ ಸಂಕಲ್ಪ ಗೋಪಾಲ ವಿಠ್ಠಲನ್ನ ।
ಭಕ್ತರಿಗೆ ಭಯವಿಲ್ಲ ಬಲು ಆನಂದಾ ॥೩॥

ಝಂಪೆ ತಾಳ

ದ್ವೇಷಿ ಎಂತೆಂದು ಪಾಸನೆಯ ಮಾಳ್ಪರಿಗೆ ।
ದ್ವೇಷಿಯಾಗಿ ದುಃಖ ಉಣಿಸುವನು ।
ದ್ವೇಷರಹಿತನೆಂದುಪಾಸನೆಯ ಮಾಳ್ಪರಿಗೆ ।
ಮೀಸಲಾನಂದ ಸುಖ ಮಿಗಿಲುಣಿಸುವಾ ।
ದೋಷವಾರದು ನೋಡು ಚೇತನ ಯೋಗ್ಯತೆ ।
ನಾಶ ಮಾಡದದರ ಬೀಜ ಮೂಲಾ ।
ನಾಸಿವಿಯ ಬಿತ್ತಿನ್ನು ನಾಸಿವಿಯು ಬೆಳೆವ ಕಾ ।
ರ್ಪಾಸು ಬೆಳೆದರೆ ಇದು ದೋಷವಲ್ಲೆ ।
ವೈಷಮ್ಯ ನೈರ್ಘೃಣ್ಯ ಈಷನ್ಮಾತ್ರ ।
ದೋಷ ಚಿಂತನೆ ಜಗದೀಶಗಿಲ್ಲಾ ।
ವಾಸುದೇವ ಗೋಪಾಲ ವಿಠ್ಠಲನೆಂತು ।
ಪಾಸನೆಯ ಮಾಳ್ಪರಿಗಂತಂತೆ ಫಲವೀವ ॥೪॥

ತ್ರಿವಿಡಿ ತಾಳ

ಹರಿ ಎಂಬೊ ವನಧಿಯು ಕರುಣವೆಂಬೋ ಜಲಕ್ಕೆ ।
ಎರಡು ಧಡವು ಭಕುತಿ ವಿರುಕತಿಯನು ಮಾಡಿ ।

ಪರಜ್ಞಾನವೆಂಬ ನಾವೆಯನು ಆಶ್ರೈಸಿ ।
ಪರಿಪರಿ ಗುಣವೆಂಬ ರತುನವ ಹುಡುಕುತ ।
ನಿರುತ ಅಲ್ಲಿಹ ದಿವ್ಯ ನೆರೆ ಕಥಾವೃತ ಉಣುತ ।
ಮರೆ ಹೊಕ್ಕೀ (ಮೊರೆ)ಕ್ಕೈನ್ನಿರೋ । ಕೃಷ್ಣನೆಂಬೊ ಶರಧಿಬಿದ್ದ್ದ।
ಬರಬೇಡಿರೆನ್ನ ಗೊಡಿವೆ ದುರಿತ ಕಾಮ ಕ್ರೋಧಗಳೆ ।
ಹರಿದು ಹೋಗುವಿ ರಿತ್ತ ಬರಲು ಯೋಗ್ಯರಲ್ಲಾ ।
ಶಿರವ ಚಂಡಾಡುವೆಮ್ಮರಸು ಕಂಡರೆ ನಿಮ್ಮ ।
ಸರಿ ಹೋದ ಸ್ಥಳಗಳಲಿ ಇರಹೋಗಿ ಇರಹೋಗಿ ।
ಸಿರಿ ಮಹಾರಾಜ ಗೋಪಾಲ ವಿಠ್ಠಲ ರೇಯನ ।
ಪರಿಚಾರಕರ ಪರಿಚಾರಕರಾಳು ನಾ ॥೫॥

ಅಟ್ಟ ತಾಳ

ಕೋಪಂಗಳೆನ್ನ ಸಂತಾಪ ಪಡಿಸದಿರಿ ।
ಶ್ರೀಪತಿ ಫೇಳಿ ನಾ ಕೊಲಿಯ ಕೊಲ್ಲಿಸುವೆನು ।
ಕೊಪಂಗಳ್ಯಾ ಪುಣ್ಯ ಲೋಪ ಮಾಡಿಸದಿರಿ ।
ವ್ಯಾಪಕನಾದ ವಿಷ್ಣುವಿಘೋಗಿ ಪೇಳುವೆ ।
ರೂಪಂಗಳೆ ಅನ್ಯ ರೂಪ ನೋಡಲಿ ಬೇಡಿ ।
ಆ ಪುರುಷ ಹೃಷಿಕಪಗೆ ಪೇಳುವೆ ।
ತಾಪಸ ರೊಡಿಯ ಗೋಪಾಲ ವಿಠ್ಠಲ ಎನ್ನ ।
ಕಾಪಾಡುವನು ನಿಮ್ಮ ವ್ಯಾಪಾರ ನಿಲ್ಲಿಸಿ ॥೬॥

ಆದಿ ತಾಳ

ಭಕುತ ಸಾರ್ಥ (ನಾರ್ತ) ಭಯ ನಿವಾ (ರಣಾ) ರ್ಣಾ ।
ಮುಕುತಿ ದಾತಾ ಮುಕುಂದಾ ನಂದಾ ।
ಶಕುತಾ ವ್ಯಕುತಾ ಸಾರ ಭೋಕ್ತಾ ।
ಸುಖ ಸಮುದ್ರ ಸುರ ನದಿ ಜನಕಾ ।
ಅಕುಟಿಲ ಅಷ್ಟ (ಮುದ) ಮದ ಸಂಪನ್ನ ।
ಸ್ವಕುಲ ನಾಶಕ ಸ್ವಾರ್ಥ ರಹಿತಾ ।
ಸುಖವ ಯ ಕಾಯಾ ಸುಲಭ ದೇವಾ ।

ಸಾಕಾರ ರೂಪ ಸರ್ವಜ್ಞನೆ ।
ಪ್ರಾಕೃತ ದೂರಾ ಪರಮ ಪುರುಷ ।
ನಾಕೇಶ ವಂದಿತ ಗೋಪಾಲ ವಿಠ್ಠಲ ।
ಸಾಕುವ ಸರ್ವದಾ ಸನ್ನಿಧಿಯಲಿದ್ದು ॥೭॥

ಜತೆ

ಹರಿಯು ಸರ್ವೋತ್ತಮನೆಂದು ನಿಶ್ಚಯದಿಪ್ಪ ।
ನರಗೆ ನಿರಯವಿಲ್ಲ ಗೋಪಾಲ ವಿಠ್ಠಲ ಬಲ್ಲಾ ॥೮॥

## ಸುಳಾದಿ ೭

ಶ್ರೀಹರಿ ಸರ್ವತಂತ್ರ ಸ್ವತಂತ್ರನಾದರೂ ಕರುಣಾಳು. ಹರಿಯು ಪ್ರಯೋಜನವಿಲ್ಲದೇ ಜೀವರುಗಳ ರಕ್ಷಣೆ ಭಾರಕರ್ತನು ಅನ್ಯರೊಬ್ಬರಿಲ್ಲ. ಸಕಲ ಕಾಲದಲ್ಲಿ ಅವನೆ ರಕ್ಷಕ, ಮಹಾರಾಜಾಧಿರಾಜ.

ರಾಗ ಭೈರವಿ ಧ್ರುವತಾಳ

ಅಪಕಾರ ಉಪಕಾರ ಹರಿಯೆ ನಿನ್ನಿಂದ ಲೇವೆ ।
ರಿಪು ಮಿತ್ರ ಗಳವ್ಯಾಪಾರ ಹರಿಯೆ ನಿನ್ನದು ನೋಡಾ ।
ಕಪಟ ನಿಷ್ಕಪಟತ್ವ ನಿನ್ನಿಂದಲಾಗುವದು ।
ಶಪಥ ಅಶಪಥಗಳು ನಿನ್ನಾಧೀನವು ಸ್ವಾಮಿ ।
ಕ್ಲಿಪುತ ಅಕ್ಲಿಪುತಗಳು ನಿನ್ನಾಧೀನವು ನೋಡಾ ।
ಅಪರಾಧ ಸುಪರಾಧ ನಿನ್ನಾಧೀನವು ನೋಡಾ ।
ಅಪವರ್ಗ ಸುಪವರ್ಗ ನಿನ್ನಾಧೀನ ।
ಸಪುತ ದ್ವಿಲೋಕ ಸಪುತದ್ವೀಪ ನಿನ್ನಾಧೀನವು ।
ಸಪುತಾವರ್ಣವು ಉಳ್ಳ ಬೊಮ್ಮಾಂಡ ನಿನ್ನಾಧೀನ ।
ಸ್ವಪನ ಜಾಗ್ರಸುಷುಪ್ತಿವ್ಯಾಪಾರ ನಿನ್ನಾಧೀನ ।
ಸಫಲ ನಿಷ್ಫಲ ಸರ್ವಸಾಧನ ನಿನ್ನಾಧೀನ ।
ಉಪದೇಶಾನುಪದೇಶಗಳು ನಿನ್ನಾಧೀನ ।
ಗುಪುತ ವ್ಯಾಪುತ ಮೂರ್ತಿಗೋಪಾಲ ವಿಠ್ಠಲ ।
ತೃಪುತ ನಿತ್ಯ ನಿರ್ಲಿಪ್ತ ನಿರ್ದೋಷನಿಜಾನಂದ ॥೧॥

ಮಟ್ಟ ತಾಳ

ಲೋಕಾ ಲೋಕಾದಿಗಳಲ್ಲಿ ವ್ಯಾಪ್ತ ।
ಲೋಕಾಧಿಪತಿಗಳಿಗೆ ಒಡೆಯಾ ।
ಸಾಕಾರನಾಗಿ ಸಾಕುವನು ।
ಆಕಾರ ಅಂತ್ಯ ಕಂಡವರಿಲ್ಲ ।
ಶೋಕ ಮಾಡುವ ಗತಿಗಳ ಅರಿದು ।
ನಾಕಾಣೆ ಇನ್ನೊಂದೊಸ್ತ ಸಾದ್ರಿಸ್ಯವ್ನೋ ।
ಶ್ರೀ ಕರುಣಾಕರ ಗೋಪಾಲ ವಿಠ್ಠಲ ।
ಏಕನಲ್ಲದೆ ಅನ್ಯರ ನಾಕಾಣೆ ಪ್ರಭುವಿನ್ನ ॥೩॥

ರಾಗ ರೂಪಕ ತಾಳ

ಹರಿ ಅರಿವಂತೆ ಪರಿಚಾರಕ ರಾರಿವನಾವ ।
ಹರಿ ಸೇವೆ ಕೊಡಂತೂಳಿಗವಕೊಂಬನಾವ ।
ಹರಿ ತಿಳಿಸಂತೆ ತಿಳಿದು ಸಾಕುವ ನಾವ ।
ಹರಿ ನೋಡಿದಂತೆ ಪರಿವಾರ ನೋಡುವ ನಾವ ।
ಹರಿ ಆಳಿದಂತೆ ಪರಿಚಾರಿಕರಾಳುವ ನಾವ ।
ಹರಿ ಸಾರ್ವಭೌಮ ಸುರ ಚಕ್ರವರ್ತಿನೋಡು ।
ಸಿರಿ ರಾಜಾಧಿರಾಜ ಧೊರೆ ಮಹಾರಾಜ ।
ಸಿರಿ ಅಜಭವ ವಂದ್ಯಾಗೋಪಾಲ ವಿಠ್ಠಲ ।
ಧೊರೆ ಒಬ್ಬನಲ್ಲದೆ ನರರು ಪ್ರಭುಗಳೆ ॥೪॥

ಝಂಪೆ ತಾಳ

ತನ್ನ ಯೋಗಕ್ಷೇಮವನ್ನು ಅರಿಯದ ಪ್ರಭುವು ।
ಇನ್ನಾವ ಪರಿವಾರದಿರವನು ಬಲ್ಲನೆ ? ।
ತನ್ನಗಾಗೊ ಸುಖ ದುಃಖ ತಾನರಿಯದವ ।
ಅನ್ಯರಿಗನುಭವ ತಂದೀಯಲಾಪನೆ ।
ಭಿನ್ನ ಕಾಮದಲ್ಲಿ ಬಯಕಿ ಉಳ್ಳವನು ।
ಚಿನ್ಮಯ ಹರಿಯಂತೆ ನಮ್ಮ ಪಾಲಿಸುವನೆ ।

ಅನಂತ ಗುಣ ಪೂರ್ಣ ಗೋಪಾಲ ವಿಠ್ಠಲ ।
ಇನ್ನಿಂಥ ಪ್ರಭುವಿರಲು ಅನ್ಯರ ಗೊಡಿವ್ಯಾಕೆ ॥೪॥

ತ್ರಿವಿಡಿ ತಾಳ

ಬೊಮ್ಮಾಂಡವೆ ಪುರವು ಬೊಮ್ಮನಯ್ಯನ ಪಿತನು ।
ರಮ್ಮೆ ದೇವಿಯೆ ಮಾತಾ ಸುಮನಸರೆ ಬಂಧು ।
ಧರ್ಮಾಧರ್ಮಗಳೆಂಬ ನಿರ್ಮಳೆಂಬೆರಡು ವೃತ್ತಿ ।
ಕರ್ಮವೆಂಬ ಭೂಮಿಯಲ್ಲಿ ಬಿತ್ತಿ ।
ನಮ್ಮ ಯೋಗ್ಯತೆ ತಕ್ಕ ಸಂಬಂಧ ಫಲಗಳು ।
ಒಮ್ಮೆಗಾದರು ಕೊಡಲು ಕಡಿಮೆ ಇಲ್ಲದಂತೆ ।
ಎಮ್ಮಯ್ಯ ಸಾಕು ಸಂಬಂಧರದು ಇಲ್ಲ ।
ಹಮ್ಮು ಸಲ್ಲದು ನರನೆ ಈ ಮಹಿ ನಿನ್ನದೆ ।
ನಮ್ಮ ಸಾಕುವ ಧೊರೆ ಗೋಪಾಲ ವಿಠ್ಠಲ ।
ಅಮ್ಮಹಿಮಃ ನಿರಲಾಗಿ ನಿಮ್ಮ ನುತಿಸಲ್ಯಾಕೆ ॥೫॥

ಅಟ್ಟ ತಾಳ

ಜನನಿ ಗರ್ಭದಲಿ ತನುವು ಪೊರೆದವನಾವ ।
ಜನಕನ ಉದರದಿ ತಂದು ಇಟ್ಟವನಾವ ।
ಎನಗೆ ಶ್ರೀಹರಿಪಾದ ವನಜ ಧ್ಯಾನದ ಬಲ ।
ಇನಿತಾದರೆನ್ನಲ್ಲಿ ಅನುವಾಗಿ ಇತ್ತೆ ।
ಮನಿಗೆ ಇದ್ದಲ್ಲಿಗೆ ತನಗೆ ತಾನೆ ಸರ್ವ ।
ಧನಕಾಮ ಕನಕ ವಸನ ಮುಂತಾದವು ಎಲ್ಲ ।
ಶಣಸ್ಯಾಡಿ ಒಲ್ಲೆಂದರೆ ಬಿಡವವು ಕಾಣೋ ।
ಸನಕಾದಿಗಳ ವಂದ್ಯ ಗೋಪಾಲ ವಿಠ್ಠಲ ।
ಘನದೈವ ಎನಗಿರೆ ಮನುಜರ ಮಾತೇನು ॥೬॥

ಆದಿ ತಾಳ

ಹರಿಯೆ ನರಿಯದವನೆ ದಾರಿದ್ರ ।
ಹರಿಯ ನರಿದ ಬಡವ ಸಂಪನ್ನ ।

ಹರಿಯು ಸೀಯ್ಯದ ವರವು ಅನಿತ್ಯ ।
ಅರಿಯ ದುಣುವನ ಸಿರಿಯು ಮಿಥ್ಯಾ ।
ಹರಿಯ ಭಜಿಸದೆ ಬದಿಕಿದ್ದೆ ವ್ಯರ್ಥ ।
ಹರಿಗೆ ತನ್ನ ಶರಣರಲ್ಲೆ ಸ್ವಾರ್ಥಾ ।
ಹರಿ ಅವತಾರ ಗೋಪಾಲ ವಿಠ್ಠಲ ।
ಧೊರೆ ಒಬ್ಬನೆ ಮನವೆರಕ ಎನಗಿನ್ನು ॥೭॥

ಜತೆ

ರಾಜಾಧಿರಾಜ ಗೋಪಾಲ ವಿಠ್ಠಲ ಮಹಾ ।
ರಾಜನಿರಲು ಅನ್ಯ ರಾಜರ ಗೊಡಿವ್ಯಾಕೆ ॥೮॥

## ಸುಳಾದಿ ೮

ಶ್ರೀಹರಿ ಸ್ವತಂತ್ರ ಕರ್ತಾ ಆತನ ಪ್ರೇರಣೆ ಇಲ್ಲದೆ ಒಂದು ಹುಲ್ಲು ಕಡ್ಡಿಯಾದರೂ ಚಲಿಸುವದಿಲ್ಲವೆಂಬ ಅನೇಕಶ್ರುತ್ಯರ್ಥ, ಜೀವರಿಗೆ ಯಾವಸ್ವತಂತ್ರವಿಲ್ಲ

ರಾಗ ಭೈರವಿ, ಧ್ರುವತಾಳ

ಸರ್ವ ಕರ್ತೃ ಶ್ರೀಹರಿ ಅಲ್ಲದಿನ್ನಿಲ್ಲವಿನ್ನು ।
ಸರ್ವ ಜಗತ್ತಿನಲ್ಲಿ ವ್ಯಾಪಿಸಿಹಾ ।
ಸರ್ವ ಜೀವರಿಗಿನ್ನು ಸಮನಾಗಿ ಇರುತಿಪ್ಪ ।
ಸರ್ವ ಪುಣ್ಯ ಪಾಪವು ಮಾಡಿಸುತ್ತ ।
ನಿರ್ವ್ಯಾಜ್ಯದಿಂದಲೆ ನಿತ್ಯ ಕರ್ಮವ ಮಾಡಿ ।
ಸರ್ವ ಜೀವರಿಗಿನ್ನು ಉಣಿಸುವನು ।
ಸರ್ವ ದೋಷ ದೂರ ಸರಿಯು ಇಲ್ಲದ ವಸ್ತಾ (ಸ್ತು) ।
ಸರ್ವಜ್ಞ ಸಗುಣ ರಹಿತ ಸರ್ವ ಶಕ್ತಾ ।
ಸರ್ವ ಗುಣಪೂರ್ಣ ಸಚ್ಚಿದಾಂದಾತ್ಮಕ ।
ಸರ್ವಾನಂದಪೂರ್ಣ ಸರ್ವೋತ್ತಮ ।
ಪೂರ್ವಿಕ ದೇವ ನಮ್ಮ ಗೋಪಾಲ ವಿಠಲ ।
ಸರ್ವಜೀವರಲ್ಲಿ ಪೋಷಿಸುವಾ ॥೧॥

ಮಟ್ಟತಾಳ

ವಿಷಯಂಗಳ ಸೃಜಿಸಿ ವಿಷಯದೊಳಗೆ ನಿಂತು ।
ವಿಷಯ ನಾಮಕನಾಗಿ ವಿಷಯ ಬಯಕೆವುಳ್ಳ ।
ವಿಷಯ ಜೀವರಿಗೆ ವಿಷಕೆ ಪ್ರೇರಣೆ ಮಾಡಿ ।
ವಿಷ ಅನುಭೋಗದ ವಿಷಯ ಮನಕೆ ತಂದು ।
ವಿಷಯ ಉಣಿಸಿ ದ್ಸುರುವಿಷಯನು ತಾನಾಗಿ ।
ವಿಷಯ ಸಂಬಂಧದ ವಿಷವು ಉಣಿಸಿ ದುಃಖ ।
ವಿಷಯ ಅಂಬುಧಿಯಲ್ಲೆ ವಿಷ ಎರಡೂ ಮಾಡುವ ।
ವಿಷಯ ಬಯಕೆ ಬಿಟ್ಟ ವಿಶೇಷ ಜೀವರಿಗೆ ।
ವಿಷಯ ಉಣಿಪ ಮುಖ್ಯ ವಿಷಯನು ತಾನಾಗಿ ।
ವಿಷಯ ಸಂಬಂಧದ ವಿಷವು ಉಣಿಸನು ।
ವಿಷಯ ರಹಿತ ಸರ್ವಗೋಪಾಲ ವಿಠಲ ।
ವಿಷಯ ನಾಗುವ ತನ್ನ ವಿಷಯಕರಿಸುವಗೆ ॥೨॥

ರೂಪಕತಾಳ

ಇಂದ್ರಿಯಗಳಲಿ ನಿಂತು ಇಂದ್ರಿಯ ಮಾನಿನಿಗಳಿಗೆ ।
ಛಂದದಿ ಪ್ರೇರಿಸುವ ಒಂದೊಂದು ಕರ್ಮದಿ ।
ತಂದೀವ ತಜ್ಜನ್ಯ ಫಲವನು ಅವರಿನ್ನು ।
ನಿಂದಿಹ ದೇಹದಿ ಉಳ್ಳ ಜೀವನಿಗೆ ।
ದ್ವಂದ್ವ ಕರ್ಮ ಅವರಿಂದಲೆ ಮಾಡಿಸಿ ।
ದ್ವಂದ್ವ ಫಲವನು ತಂದುಈವಾ ।
ದ್ವಂದ್ವ ಜೀವರಗಳ ಗತಿಯು ಅರಿತು ಇನ್ನು ।
ಸಂದೇಹವಿಲ್ಲದೆ ಈಪರಿ ಕರ್ಮವು ।
ನಿಂದಿರದೆ ಮಾಡಿಸುವ ಮಾನಿಗಳಿಂದ ।
ಗಂಧ ಇವರಿಗೆ ಇಲ್ಲ ದೋಷ ಸಂಬಂಧದ ।
ಮಂದರಧರ ಗಂತು ಮೊದಲೆ ಇಲ್ಲ ।
ಸುಂದರ ವಿಗ್ರಹ ಗೋಪಾಲ ವಿಠ್ಠಲ ।
ಬಂಧಕ ಮೋಚಕ ಶಕ್ತನಯ್ಯಾ ॥೩॥

ಝಂಪೆ ತಾಳ

ಹರಿಯು ಆಜ್ಞೆಯಿಂದ ಅಗ್ನಿ ತಾ ಜ್ವಲಿಸುತಿಹನು ।
ಹರಿಯು ಆಜ್ಞೆಯಿಂದ ತರಣಿ ತಾ ತಿರುಗುವನು ।
ಹರಿಯು ಆಜ್ಞೆಯುದಿಂದ ಮರುತ ತಾ ಬೀಸುವನು ।
ಹರಿಯು ಆಜ್ಞೆಯುದಿಂದ ಹರಿವವು ಸಲಿಲಗಳು ।
ಹರಿಯು ಆಜ್ಞೆಯಿಂದ ಇರುತಿಹದು ಆಕಾಶ ।
ಹರಿಯು ಆಜ್ಞೆಯಿಂದ ಧರಿಸಿಹಳೀ ಧರಣಿ ।
ಹರಿಯು ಆಜ್ಞೆಯಿಂದ ಪರಿತಪಿಸುವ ಚಂದ್ರ ।
ಹರಿಯು ಆಜ್ಞೆಯಿಂದ ಮರಬಳ್ಳಿ ಫಲಿಸುವವು ।
ಹರಿಯು ಆಜ್ಞೆಯಿಂದ ಕರೆವವು ಗೋವುಗಳು ।
ಹರಿಯು ಆಧೀನ ಇವರವರೆಂದು ಮಿತಿಯಿಲ್ಲ ।
ಹರಿಯೆ ಸರ್ವ ವ್ಯಾಪ್ತ ಜ್ಞೇಷ್ಟಿಗೆ ನಿಯಾಮಕ ।
ಸರಿ ಇಲ್ಲದ ವಸ್ತು ಗೋಪಾಲ ವಿಠ್ಠಲ ।
ಇರುತಿಪ್ಪ ಇಷ್ಟರೊಳು ಅರಿತು ಯೋಗ್ಯತೆಯ ॥೪॥

ತ್ರಿವಿಡಿ ತಾಳ

ಭೇದವಿಲ್ಲದೆ ಇಪ್ಪ ಇಷ್ಟರೊಳಗೆ ತಾನು ।
ಭೇದವಾಗ ಕಾರ್ಯ ಮಾಡಿಸುತ ।
ಆದಿಯಲ್ಲಿ ಪೂರ್ಣ ಅಂತಿಯಲ್ಲಿ ಪೂರ್ಣ ।
ಭೇದ ಜೀವರಲ್ಲಿ ಭೇದ ಕರ್ಮ ಮಾಡಿಪ್ಪ ।
ಸಾಧು ಅಲ್ಲಿದ್ದ ಕಾರ್ಯ ಕ್ರೋಧರಲ್ಲಿ ಮಾಡಿಸಾ ।
ಕ್ರೋಧರಲ್ಲಿದ್ದ ಕಾರ್ಯ ಸಾಧು ಅಲ್ಲಿ ಮಾಡಿಸಾ ।
ಸಾಧುರೊಳಗೆ ಬೊಮ್ಮನ ಮೊದಲು ಮಾಡಿ ।
ಕ್ರೋಧರೊಳಗೆ ಇನ್ನು ಆದಿ ಕಲಿಯ ಮಾಡಿ ।
ಈ ದಾವ ತಾರತಮ್ಯವಾದ ಜೀವರುಗಳಿಗೆ ।
ಮಾಧವ ನಿತ್ಯದಿ ಸುಖ ದುಃಖ ಉಣಿಸುವ ।
ಶೋಧಿಸಿ ತಿಳಿದರೆ ಜಡಚೇತನದಿ ಭಿನ್ನ ।

ಆದಿ ಮೂರುತಿ ರಾಮ ಗೋಪಾಲ ವಿಠ್ಠಲ ।
ಆದರಿಸುವನಯ್ಯ ಆವಲ್ಲಿದ್ದರನ್ನ ॥೫॥

ತಾಳ ಅಟ್ಟ

ಕರ್ತೃ ಹರಿಯೆ ಮುಖ್ಯ ಹೊರ್ತಿನ್ನೊಬ್ಬರಿಲ್ಲ ।
ಆರ್ತರಿಗೆ ಅರಿವೆವು ಮರ್ತರೆ ಮರಿವೆವು ।
ಕೀರ್ತಿಗೆ ಇವನಪಕೀರ್ತಿಗೆ ಇವನೆ ।
ಆರ್ತ ಜೀವರ ಗತಿ ಸ್ಫೂರ್ತಿಯ ಕೊಡುವನು ।
ವ್ಯರ್ಥ ಮಾಡನು ಹೀಗೆ ಅರ್ತಿವ ಮನುಜಗೆ ।
ಭರ್ತಿ ಮಾಡಿಜ್ಞಾನ ಅರ್ಥಿಯ ತೋರುವ ।
ಸರ್ತಿ ಇಲ್ಲದ ದೈವ ಗೋಪಾಲ ವಿಠ್ಠಲ ।
ಮೂರ್ತಿ ಮಂತನಾಗಿ ಇರುತಿಹ ನಮ್ಮೊಳು ॥೬॥

ಆದಿ ತಾಳ

ಮೂರು ಗುಣದೊಳಗೆ ಮೂರುತಿ ಆಗಿದ್ದು ।
ಮೂರು ಬಗೆಯ ವ್ಯಾಪಾರವ ಮಾಡುವ ।
ಮೂರು ವೆಂಬೊದೆ ಮೂಲ ಕಾರಣ ಸಂಸಾರ ।
ಮೂರು ಎಂಬೊದು ನಿತ್ಯ ಆರಿಸಿ ನೋಡಲು ।
ಕಾರಣನಾಗಿ ಹರಿಕಾರ್ಯವ ಮಾಡಿಸಾ ।
ಮೂರರಿಂದಲಿ ಭಿನ್ನ ಮೂರುತಿಯನು ನಿತ್ಯ ।
ಆರಾಧಿಸುವಗೆ ತೋರುವ ತನ್ನನು ।
ಮಾರುತ ವಂದ್ಯ ಪಾದ ಗೋಪಾಲ ವಿಠ್ಠಲ ।
ಭಾರಕರ್ತನು ಭವ ಭಾರವನಿಳಹುವ ॥೭॥

ಜತೆ

ಸ್ವಾಮಿ ರಹಿತನಾದ ಸ್ವಾಮಿ ಎನಗೆ ಸ್ವಾಮಿ ।
ಸಾಮಜ ವರದ ಗೋಪಾಲ ವಿಠ್ಠಲ ಬಂಧು ॥೮॥

## ಸುಳಾದಿ ೯

ಶ್ರೀಹರಿಯು ತ್ರಿವಿಧ ಜೀವರಲ್ಲಿಯೂ ನಿಂತು ಪ್ರೇರಕನಾಗಿ ನಾನಾ ವ್ಯಾಪಾರಗಳನ್ನುಮಾಡಿ ಮಾಡಿಸುವದು ಶ್ರೀ ಹರಿಯಾಧೀನ, ಸಕಲ ವ್ಯಾಪಾರವೂ ನನದಲ್ಲ. ಶ್ರೀ ಹರಿಯೇ ನಿನ್ನದೆಂದು ಪ್ರಾರ್ಥಿಸು.

ರಾಗ ಶಂಕರಾಭರಣ, ಧ್ರುವತಾಳ

ಆಡಿ ಆಡಿಸುವನು ನಾಡ ಜೀವನರನ್ನು ।
ಮಾಡಿ ಮಾಡಿಸುವನು ನಾಡ ಜೀವರಕೈಯ್ಯಾ ।
ಬೇಡಿ ಬೇಡಿಸುವನು ನಾಡ ಜೀವರಕೈಯ್ಯಾ ।
ನೋಡಿ ನೋಡಿಸುವನು ನಾಡ ಜೀವರುಗಳ ।
ಓಡಿ ಓಡಿಸುವನು ನಾಡ ಜೀವರನ್ನು ।
ನೀಡಿ ನೀಡಿಸುವನು ನಾಡ ಜೀವರ ಕೈಯ್ಯಾ ।
ಕೇಡು ಲಾಭವು ಎರಡು ಕೂಡಿ ಹರಿ ಆಧೀನ ।
ಮಾಡಿಸುವ ಯೋಗ್ಯತೆ ಹಿಡಿದು ಸಾಧನವಾ ।
ರೂಢಿಯೊಳಗೆ ಇನ್ನು ಈಡಾದ ವಸ್ತುವಿಲ್ಲಾ ।
ನಾಡ ಜೀವರಿಗೀತ ನಲ್ಲದೆ ಗತಿಯಿಲ್ಲಾ ।
ಪಿಡೇಮನವೆ ನಿನ್ನನಾಡ ಯೋಚನೆಹೋಗಾ ।
ಲಾಡಿ ಹರಿಯ ಪಾದನೋಡಿ ಸುಖಿಯಾಗಿರು ।
ನಾಡದೈವರ ಗಂಡ ಗೋಪಾಲ ವಿಠ್ಠಲನ್ನ ।
ಹಾಡಿ ಪಾಡಿ ಕೊಂಡಾಡಿ ಬೇಡಿಕೊ ಸದ್ಗತಿಯ ।

ಮಟ್ಟತಾಳ

ನನ್ನದೆಂಬದರೊಳು ನಿನ್ನದೆ ಹರಿಯನ್ನು ।
ಉಣ್ಣೊ ಊಟವು ಎಲ್ಲ ನಿನ್ನದೆ ಹರಿಯನ್ನು ।
ಚಿನ್ನ ರೌಪ್ಯಗಳು ಬಣ್ಣಬಿಳಿದು ಎಲ್ಲ ।
ಕಣ್ಣಿಲಿ ಕಂಡದ್ದು ನಿನ್ನದೆ ಹರಿಅನ್ನು ।
ಪುಣ್ಯ ಪಾಪಗಳು ನಿನಗೆ ಮಾಡಲಿಕ್ಕೆ ।
ಇನ್ನು ಸ್ವಾತಂತ್ರವು ಎಂದೆಂದಿಗೆ ಇಲ್ಲಾ ।

ಕಣ್ಣು ಇಲ್ಲದವಗೆ ಅನ್ನ ಉಣಿಸಿದಂತೆ ।
ಪುಣ್ಯಾತ್ಮದೇವ ಎನ್ನ ಪಾಲಿಸುವನು ।
ನಿನ್ನ ಕರ್ತೃತ್ವವು ಹರಿ ಆಧೀನವು ।
ಮನ್ನಿಸುವನು ತನ್ನ ಮನ ಬಂದಂತಾಡಿ ।
ಅನ್ಯ ದೈವರ ಗಂಡ ಗೋಪಾಲ ವಿಠ್ಠಲ ।
ಅನಂತ ಶಕ್ತನು ಅನಂತ ಗುಣಪೂರ್ಣ ॥೧॥

ರೂಪಕತಾಳ

ಊರ ಒಳಗಿನ ವಸ್ತು ಆರಾದರು ಕೈದರೆ ।
ದೂರು ಹಾಕಿ ತಳವಾರರ ಹೊಡೆದಂತೆ ।
ಕ್ರೂರವಚನ ನಿಷ್ಠುರ ಜಿಹ್ವೆನುಡಿದರೆ
ಸೇರದೆ ಪರರು ಹಲ್ಲುದರ ಬಡದಂತೆ ।
ಆರು ಮೆಚ್ಚದ ತಪ್ಪು ಕರಗಳು ಮಾಡಿದರೆ ।
ಹುರಿ ಬೆನ್ನಾ ಚರ್ಮ ಹಾರ ಹೊಡೆದಂತೆ ।
ಆರಾರಲ್ಲಿ ಕರ್ತಾ ಕಾರಯಿತಾ ಪ್ರೇರಕ ।
ಮಾರಜನಕನೆ ವ್ಯಾಪಾರ ಮಾಡಿಸಿ ಜೀವ ।
ನರಿಗೀ ಪ್ರಕಾರ ಕರ್ಮ ಫಲವುಣಿಸುವಾ ।
ಆರು ಈತಗೆ ಒಂದು ಸರಿಯಾದ ವಸ್ತುವಿಲ್ಲ ।
ವಾರಿಜ ನಾಭನೆ ಸರ್ವೋತ್ತಮ ಕಾಣಿರೊ ।
ಶ್ರೀ ರಮಣ ನಮ್ಮ ಗೋಪಾಲ ವಿಠ್ಠಲ ।
ಧೀರರಿಗೆ ಧೀರ ಕಾರುಣ್ಯಸಾಗರ ॥೨॥

ಝಂಪೆ ತಾಳ

ದೇವನೆಂದರೆ ನಮ್ಮ ದೇವ ಈತನೆ ಕಾಣೊ ।
ದೇವಾದಿ ದೇವತೆಗಳಿಗೆ ದೇವದೇವರೆಂಬೊಮಿಕ್ಕ ।
ದೇವತಿಗಳಿಗೆಲ್ಲ ದೇವ ಈತನೆ ಕಾವುತಾನೆ ನೋಡಿ ।
ದೇವನಿಲ್ಲದ ಸ್ಥಳವು ಆವಲ್ಲಿ ಇಲ್ಲವಿನ್ನು ।
ದೇವ ಸರ್ವತ್ರದಲ್ಲಿ ವ್ಯಾಪಕ ಭಾವಶುದ್ಧದಲಿನ್ನು ।
ಸೇವಿಸಿದರಿನ್ನು ದೇವ ದೇವಕ್ಕಿಗೆ ಕಂದನಾದಾ ।

ಗೊವಳರೊಡಿಯ ನಮ್ಮ ಗೋಪಾಲ ವಿಠ್ಠಲನ್ನ |
ಕಾವ್ಯೊ ಘನ ವಯ್ಯಾ ಇನ್ನಾವಲ್ಲಿದ್ದರನ್ನ ||೫||

ತ್ರಿವಿಡಿ ತಾಳ

ಲೋಕಾ ಲೋಕದೊಳು ಅನೇಕ ಜೀವರುಂಟು |
ಶೋಕಾ ಲೋಕಾಚಾರ ಅನೇಕ ಕರ್ಮಗಳುಂಟು |
ಲೋಕ ಲೋಕದೊಳಗೆ ತ್ರಿವಿಧ ಜೀವರುಂಟು |
ಲೋಕ ಲೋಕಕೆ ಎಲ್ಲ ಸಾಕುವನೊಬ್ಬನೆ |
ಕಾಕುಗೊಂಡಿನ್ನು ಕಂಡವರಿಗೆ ಬೇಡಿದರೆ |
ತಾ ಕೊಡುವರೆಲ್ಲಿಂದ ತಾ ಕಾಣದವರೆಲ್ಲ |
ಸಾಕುವ ನೊಬ್ಬನೆ ಸಕಲ ಜೀವರುಗಳ |
ನೀಕೇಳು ಮನವೆ ನಿನ್ನ್ಯಾಕುಲವನು ಬಿಡು |
ಏಕ ಚಿತ್ತದಲಿನ್ನು ಏಕೋ ದೇವನ ಭಜಿಸು |
ಸಾಕಲ್ಯ ಗುಣ ಪೂರ್ಣ ಗೋಪಾಲ ವಿಠ್ಠಲ |
ಲೋಕದಿಂದಲಿ ಭಿನ್ನ ಲೋಕರ ಪಾಲಕ ||೫||

ಅಟ್ಟ ತಾಳ

ತ್ರಿದಿಧ ಜೀವರು ಉಂಟು ತ್ರಿವಿಧ ಕರ್ಮಗಳುಂಟು |
ತ್ರಿವಿಧ ಗುಣಗಳುಂಟು ತ್ರಿವಿಧ ಕಾರ್ಯಗಳುಂಟು |
ತ್ರಿವಿಧ ರೊಳೊಂದೊಂದು ತ್ರಿವಧ ಬಗೆಯೆ ಉಂಟು |
ತ್ರಿವಿಧ ಜೀವರ ಕಾರ್ಯ ಶ್ರೀಹರಿ ಆಧೀನ |
ತ್ರಿವಿಧರಿಂದಲಿ ಭಿನ್ನ ತ್ರಿವಿಧರ ಪಾಲಕ |
ತ್ರಿ ವಿಕ್ರಮ ಮೂರುತಿ ಗೋಪಾಲ ವಿಠ್ಠಲನ್ನ |
ತಿಳಿದು ಸಾಕಲ್ಯದಿ ತಿಳಿಯುಲಿ ವಶವಲ್ಲ ||೬||

ಆದಿ ತಾಳ

ಈತನೆ ನಮ್ಮ ದೇವ ಈತನೆ ನಮ್ಮಕಾವಾ |
ಈತನೆ ನಮ್ಮ ತಂದೆ ಈತನೆ ನಮ್ಮ ತಾಯಿ |
ಈತನೆ ನಮ್ಮ ಬಂಧು ಈತನೆ ನಮ್ಮ ಬಳಗಾ |

ಈತನೆ ಇಹ ನಮಗೀತನೆ ಪರವೋ ।
ಈತನೆ ದೇಶವು ಈತನೆ ದಿಕ್ಕಿನ್ನು ।
ಈತನೆ ಗತಿ ಇನ್ನೊಂದು ದೈವವಿಲ್ಲ ।
ವಾತ ಜಾತನ ಪಿತ ಗೋಪಾಲ ವಿಠ್ಠಲ ।
ಸೋತೆನೆಂದವರ ಬೆನ್ಹತ್ತಿ ಪಾಲಿಸುವನು ॥ ೭ ॥

ಜತೆ

ಬಿಡೆನು ಬಿಡೆನು ಇನ್ನು ಮುಂದೆ ಇದೆ ದೈವಾ ॥
ಪಿಡಿದೆ ಗೋಪಾಲ ವಿಠ್ಠಲನ ಅಡಿಗಳ ಅನುದಿನ ॥ ೮ ॥

## ಸುಳಾದಿ ೧೦

ಪ್ರಮೇಯ, ಬ್ರಹ್ಮಾದಿ ತೃಣಾಂತ ಸಕಲ ಜೀವರ ಜ್ಞಾನೇಚ್ಛಾಕ್ರಿಯಾ ವ್ಯಾಪಾರ ಶ್ರೀ ಹರಿಯಾಧೀನ, ಶ್ರೀ ಹರಿಯೇ ಸರ್ವ ಕರ್ತಾಕಾರಯಿತಾ ಜೀವರು ಅಸ್ವಾತಂತ್ರರು ನಾನಾಡುವ ಮಾಡುವ ವ್ಯಾಪಾರ ನಿನ್ನಾಧೀನವೆಂದು ಪ್ರಾರ್ಥನೆ.

ರಾಗ ಭೈರವಿ, ಧ್ರುವತಾಳ

ಎನ್ನ ಜ್ಞಾನಗಳೆಲ್ಲ ಎನ್ನ ಧ್ಯಾನಗಳೆಲ್ಲ ।
ಎನ್ನ ಮಾನಗಳೆಲ್ಲ ಎನ್ನ ಸ್ನಾನಗಳೆಲ್ಲ ।
ಎನ್ನ ಮಂತ್ರಗಳೆಲ್ಲ ಎನ್ನ ತಂತುಗಳೆಲ್ಲ ।
ಎನ್ನ ದಾನಂಗಳೆಲ್ಲ ಎನ್ನ ಧರ್ಮಂಗಳೆಲ್ಲ ।
ಎನ್ನ ತೀರ್ಥಯಾತ್ರೆಯೆಲ್ಲ ಎನ್ನ ಯಾಗಂಗಳೆಲ್ಲ ।
ಎನ್ನ ಪುಣ್ಯಗಳೆಲ್ಲ ಎನ್ನ ಕೌಶಲ್ಯವೆಲ್ಲ ।
ಇನ್ನಿದರೊಳಗಿನ್ನು ಎನ್ನಿಂದಾದ ಸಾಧನ ।
ವನ್ನು ಲೇಶವಾದರು ಕಣ್ಣಲಿ ಕಂಡಿದ್ದಿಲ್ಲ ।
ನಿನ್ನ ಸ್ವಭಾವವಯ್ಯಾ ನಿನ್ನ ಕರುಣ ರಸಕಿನ್ನು ।
ಆನೆನೆಂಬೆ ಎನ್ನೊಡಿಯನೆ ಕೇಳು ।
ಎನ್ನ ಕರ್ತೃತ್ವಗಳು ಇನ್ನು ಮುನ್ನಾದದಲ್ಲ ।

ನಿನ್ನ ಆಧೀನವಯ್ಯಾ ಎನ್ನ ಫಲಾಫಲವು ।
ಮನ್ನಣಿ ಮಾಡಿಸುವಿ ಅನ್ಯರಲಿಂದ ನೀನು ।
ಮನ್ನಣಿಯುನು ಕೊಂಬೇ ಎನ್ನಲ್ಲಿ ನಿಂತುಕೊಂಡು ।
ನಿನ್ನ ಭಕ್ತರವರನ್ನು ಪಾಲಿಸೊ ಬಗೆ ।
ನಿನ್ನವರ ಮಹಿಮೆ ನೀನೆ ಬಲ್ಲಿಯೊ ದೇವ ।
ನಿನ್ನನೆ ಗತಿ ಎಂದು ಬಿನ್ನಪ ಚಿತ್ತೈಸು ।
ಘನ್ನದಯಾನಿಧಿಯೆ ಪನ್ನಗಶಯನ ಗೋಪಾಲ ವಿಠಲರೇಯ್ಯಾ
ನಿನ್ನನೆ ನಿನ್ನನೆ ನಿನ್ನನೆ ಮೊರೆಹೊಕ್ಕೆ ॥೧॥

ಮಟ್ಟತಾಳ

ಸಿರಿ ಅಜಭವ ಸುರ ಸನಕಾದಿಗಳಿಗೆ ।
ಹರಿನೀ ಚಲಿಸದಿರೆ ಬೆರಳು ಆಡಿಸಲಿನ್ನು ।
ಥರವಲ್ಲ ವೆಂತೆಂದು ವರಶ್ರುತಿ ಸ್ಮೃತಿಗಳು ।
ಪರಿಪರಿಯುಲಿ ಸ್ತುತಿಸಿ ಅರಸಿಕೊಂಡಾಡಲು ।
ಅರಿಯದೆ ನಾ ವ್ಯರ್ಥ ಮರುಳುಕರ್ತೃತ್ವಾ ।
ವರಿಸಿಕೊಂಡು ಇನ್ನು ಬರಿದೆ ದಣಿದೆನಯ್ಯಾ ।
ಪರಮ ಮೂರ್ಖನಾನು ಮರೆಹೊಕ್ಕೆ ಮರೆಹೊಕ್ಕೆ ।
ಮರದದ್ದೆಲ್ಲ ನೀನು ಅರವುಮಾಡೆನಗೀಗ ।
ಕರುಣಾಕರ ರಂಗ ಗೋಪಾಲ ವಿಠ್ಠಲ ।
ಕರುಣಾಳೆಂಬುವದು ಅರಿಯದಾದೆನಿನ್ನ ॥೨॥

ರೂಪಕತಾಳ

ಕರ ಚರಣಂಗಳ ಚೇಷ್ಟಿಪರಿ ವ್ಯಾಪಾರವು ಎನ್ನಿಂ ।
ದರಿದು ಮಾಡಿದ್ದರೆ ಅರಿಯುದಲೇ ಎನ್ನ ।
ಬೆರಳಿಂದ ಕಣ್ಣನು ಇರಿದುಕೊ ಬಲ್ಲಿನೆ ಚರಣದಿಂದಲಿ ಮುಳ್ಳು।
ಭರದಿಂದ ತುಳಿವೆನೆ ಮರಳಿ ಎನ್ನಜೆಹ್ವೆ ।
ಮರದುನಾ (ಕಡ್ವೆಳ್ವಿನೇ) ಕಡಿವೆನೆ ।
ತೆರಿವೆನೆ ನೀ ಬಾಯನು ತೆರಿಸದಿದ್ದರೆ ನಾನು ।

ಹರಿಯೆ ನೀ ಕರ್ತನಿರೆ ಬರಿದೆ ನಾ ಕರ್ತೆಂದು ।
ಉರಲು ಹಾಕಿಸಿಕೊಂಡು ಗುರು ಗುರು ಗುಟ್ಟುವೆನೆ ।
ಶರಣರ ಪಾಲಕ ಗೋಪಾಲ ವಿಠ್ಠಲ ।
ಪೊರಿಯೆನ್ನ ಧೊರಿಯೆ ನೀ ಪರಿಪರಿ ಯಿಂದಲಿ ||೩||

ಝಂಪೆತಾಳ

ಸರ್ವರಿಗೆ ಪ್ರೇರಕ ಸರ್ವಕರ್ತಾ ಭೋಕ್ತಾ ।
ಸರ್ವತ್ರದಲಿ ವ್ಯಾಪ್ತ ಸರ್ವ ಶಬ್ದವಾಚ್ಯಾ ।
ಸರ್ವಗುಣ ಪರಿಪೂರ್ಣ ಸರ್ವದೋಷದೂರ ।
ಸರ್ವ ಜ್ಞಾನ ಗಮ್ಯ ಸರ್ವಶಕ್ತಿಮೂರ್ತಿ ।
ಸರ್ವೇಶ ಚಲುವ ಗೋಪಾಲ ವಿಠ್ಠಲರೇಯ್ಯಾ ।
ಸರ್ವಂತರಿಯಾಮಿ ಸಾರ್ವಭೌಮನವೊ ||೪||

ತ್ರಿವಿಡಿತಾಳ

ಬಂದವನು ನೀನೆ ಭಕ್ತರಮನದಲ್ಲಿ ।
ನಿಂದವನು ನೀನೆ ಪಂಢರಪುರದಲ್ಲಿ ।
ತಂದೆಯಾಗಿ ಎನಗೆ ತಾಯಿಯಾಗಿ ಎನಗೆ ।
ಬಂಧುಯಾಗಿ ಎಮಗೆ ಸಂದೇಹವಿಲ್ಲದೆ ।
ಹಿಂದೆ ಮುಂದೆ ಏಕಾಗಿ ಒಂದೆ ಪರಿಯಲ್ಲಿನ್ನು ಸಕಲಕಾಲಿನ್ನು ।
ಛಂದದಿ ಪಾಲಿಸಲಾನಂದದಿ ಎನ್ನ ಮನ ।
ಮಂದಿರದಿ ಪೊಳೆದು ನಿಂದು ಆಡುವ ರಂಗ ।
ಒಂದೆ ದೈವವೆ ನಮ್ಮ ಗೋಪಾಲ ವಿಠ್ಠಲ ।
ಕಂದನ ತಾಯಿ ಸಲಹಿದಂದಗಿ ಸಲುಹುವಿ ||೫||

ಅಟ್ಟ ತಾಳ

ಬೇ [ಬ್ಯಾ] ಡೆನ್ನಬಾರದೆ ನಾಡ ವಿಷಯಕೆ ಮನ ।
ಓಡೆದರೆ ನೀನು ಓಡುತ ಲಿಹರೆ ।
ಮಾಡಿಕೊಂಡ ಪತಿ ನೋಡುತಿರಲು ಸತಿ ।
ಈಡ ಒಬ್ಬನ ಬೇರೆ ನೋಡಿ ಕೊಂಡರೆ ಇನ್ನು ।
ಮಾಡುವನೊ ಕೃಪೆ ಕೇಡಾಗೊದಲ್ಲದೆ।

ನಾಡ ದೈವದ ಗಂಡ ಗೋಪಾಲ ವಿಠ್ಠಲ ।
ಬೋಡಿ ವಿಷಯಕ್ಕೆ ಮನ ಓಡಾಡದಂತೆ ಮಾಡೊ ॥೬॥

ಆದಿ ತಾಳ

ಗರತಿಯ ಲಕ್ಷಣ ದೊರಕಿಸು ಎನಗೆ ।
ಗರಳ ಎನಿಸು ಪರ ಅರಸಿಯುಲಿ ।
ಕುರುಹ ತಿಳುಹಿಸು ನಿನ್ನ ತತ್ವಗಳಲ್ಲಿ ।
ಮರುಳು ಬಿಡಿಸು ಮನ ಮಮತಿಗಳಲ್ಲಿ ।
ತಿರುಗಿಸೆನ್ನನ್ನು ತೀರ್ಥಯಾತ್ರೆಗಳಲ್ಲಿ ।
ಹರಟೆ ಮಾಡಿಸು ಹರಿ ವಾರ್ತೆಗಳಲ್ಲಿ ।
ಕರವ ಮುಗಿಸು ನಿನ್ನ ರೂಪಂಗಳಲ್ಲಿ ।
ಕರವ ಪಿಡಿಸು ನಿನ್ನ ಶರಣರಲ್ಲಿ ।
ಪರಮ ದಯಾಳು ಗೋಪಾಲ ವಿಠ್ಠಲರೇಯಾ ।
ಕರೆವ ವಚನಗಳಲ್ಲಿ ಆರುವಂತೆ ಮಾಡೊ ನಿನ್ನ ॥೭॥

ಜತೆ

ನಾನಾಡುವ ಮಾತೆಲ್ಲ ನಿನ್ನದೆ ವಯ್ಯಾ ।
ನಾನರಿಯೆ ನೀನೆ ಗತಿ ಗೋಪಾಲ ವಿಠಲಾ ॥೮॥

## ಸುಳಾದಿ ೧೧

"ಏನಂಮೋಚಯಾಮಿಃ" ಎಂಬ ಹರಿವಾಕ್ಯದಂತೆ ಶ್ರೀಹರಿ ಪ್ರಸಾದವೆ ಮುಖ್ಯ ಜೀವರುಗಳ ನಾನಾ ಸಾಧನ ಭಗವಂತನ ಆಧೀನ, ನಿನ್ನ ಚಿತ್ತದಲ್ಲಿದ್ದದ್ದು ಮಾಡಿಸು ಇನ್ನೊಂದು ನಾನೊಲ್ಲೆ ಎಂಬ ಪ್ರಾರ್ಥನೆ.

ರಾಗ ವಸಂತಭೈರವಿ, ಧ್ರುವತಾಳ

ಕಾಯಾ ಕ್ಲೇಶವ ಬಡಿಸಿ ಕಂಡವರಿಗೆ ಹಾರೈಸಿ ।
ಸಾಯಾಸಬಟ್ಟು ನಾನಾ ಸಾಧನವನ್ನು ಮಾಡಿ ।
ಕಾಯಾ ನಿನ್ನ ಪ್ರೀತಿ ಆಯಿತೊ ಎಂದು ಎನ್ನ ।
ಸಾಯಾಸಕೆ ಇನ್ನಾರು ಸರಿಯಿಲ್ಲ ಎಂದುಕೊಂಬೆ ।
ನ್ಯಾಯವೊ ಅನ್ಯಾಯವೊ ನಾನರಿತವನಲ್ಲ ।

